೩ನೆಯ ಇಯತ್ತೆಯ ವಿದ್ಯಾರ್ಥಿಗಳ ಸಲುವಾಗಿ.

ಹೊಸಪದ್ಧತಿಯಿಂದ ಬರೆಯಲ್ಪಟ್ಟ

ಸಚಿತ್ರ

# ಬೆಳಗಾಂವ ಜಿಲ್ಹೆಯ ಭೂವರ್ಣನೆ

ಹಾಗು

## ಮುಂಬಯಿ ಕರ್ನಾಟಕದ ಸಾಮಾನ್ಯವರ್ಣನೆ.


ಲೇಖಕರು,

ಶ್ರೀಃ—ಗಣೇಶ, ಜೀವಾಜಿ ಸುರುಪುರ

ಶ್ರೀಃ—ನಾರಾಯಣ ಹಣಮಂತ ಶೇಡಬಾಳ

ಶಾಲಾಧ್ಯಾಪಕರು ಕಾಗವಾಡ.



೧ನೆಯ ಆವೃತ್ತಿ.





ಸನ್ ೧೯೩೧ ನೇ ಇಸವಿ.

ಬೆಲೆ:— ೫ ಆಣೆ.

ಭೂಗೋಳಶಾಸ್ತ್ರ,
ಬೆಳಗಾಂ ಜಿಲ್ಲೆಯ ವರ್ಣನೆ

ಬೆಳಗಾಂವಿಯೊಳಗೆ ಶ್ರೀಯುತ ದೇವೇಂದ್ರ ಘಡೆಪ್ಪ ಚೌಗುಲೆ ಇವರು ತಮ್ಮ
'ಶ್ರೀಮಹಾವೀರ' ಮುದ್ರಣಾಲಯದಲ್ಲಿ ಮುದ್ರಿಸಿದರು.

ಮತ್ತು

ಶ್ರೀಯುತ ಗಣೇಶ ಜೀವಾಜಿ ಸುರಪುರ ಮತ್ತು ಶ್ರೀಯುತ ನಾರಾಯಣ
ಹಣಮಂತ ಶೇಡಬಾಳಕರ ಇವರು ಕಾಗವಾಡದಲ್ಲಿ ಪ್ರಸಿದ್ಧಮಾಡಿದರು.

# ಹೃದ್ಗತ!



ಕನ್ನಡ ನೆಯ ಇಯತ್ತೆಯ ಅಭ್ಯಾಸಕ್ರಮವನ್ನನುಸರಿಸಿ ಹಲವು ಬಗೆಯ ನಕಾಶೆ-ಚಿತ್ರಗಳೊಂದಿಗೆ ಭೂಗೋಲ ಶಿಕ್ಷಣಕ್ಕೆ ಹೊಸ ಮಾದರಿಯ ಸ್ವರೂಪ ಕೊಟ್ಟು, ಬೆಳಗಾಂವಿ ಜಿಲ್ಲೆಯ ಸಚಿತ್ರ ಭೂವರ್ಣನೆಯನ್ನು ಬರೆದು, ಈವರೆಗಿರುವ ಕುಂದು-ಕೊರತೆಗಳನ್ನು ಹೋಗಲಾಡಿಸಲು ಕೈಲಾದ ಮಟ್ಟಿಗೆ ಪ್ರಯತ್ನಿಸಿರುತ್ತೇವೆ.

ಈ ನಮ್ಮ ಪ್ರಯತ್ನವು ಪಾಠಾತ್ಮಕ ಪದ್ಧತಿಯುಳ್ಳದ್ದಿರುವದರಿಂದ ಶಿಕ್ಷಕರಿಗೆ ಕಲಿಸಲಿಕ್ಕೂ, ವಿದ್ಯಾರ್ಥಿಗಳಿಗೆ ವಿಷಯಜ್ಞಾನ ಮಾಡಿಕೊಳ್ಳಲಿಕ್ಕೂ ತಕ್ಕ ಸಾಧನವಾಗುವದೆಂದು ನೆರೆನಂಬಿ ಈ ಚಿಕ್ಕಪುಸ್ತವನ್ನು ಪ್ರಕಟಸಿರುತ್ತೇವೆ.

ನಮ್ಮಿ ಪುಸ್ತಕವು ಶಾಲಾಖಾತೆಯವರಿಗೂ, ಶಿಕ್ಷಕರಿಗೂ, ವಿದ್ಯಾರ್ಥಿಗಳಿಗೂ ಪ್ರಿಯವಾಗುವಂತೆ ಶ್ರೀಬಲಭೀಮನು ಸಕಲರಿಗೂ ಸದ್ಬುದ್ಧಿಯನ್ನಿತ್ತು, ಉತ್ತರೋತ್ತರ ಯಶಸ್ಸನ್ನೀಯಲೆಂದು ಅನನ್ಯ ಭಾವದಿಂದ ಪ್ರಾರ್ಥಿಸುವ,

ಬಂಧು-ದ್ವಯ.

# ಮುನ್ನುಡಿ.

ಚಿಕ್ಕ ಮಕ್ಕಳ ಚಿತ್ತವನ್ನು ಎಳೆದುಕೊಂಡು ಅವರನ್ನು ಬಹುಶ್ರುತರನ್ನಾಗಿ ಮಾಡುವ ಪುಸ್ತಕಗಳು ಕನ್ನಡದಲ್ಲಿ ವಿರಳ. ಪ್ರಾಚೀನ ಅರ್ವಾಚೀನ ಗ್ರಂಥಕಾರರಿಬ್ಬರೂ ತಮ್ಮ ತಮ್ಮ ಗ್ರಂಥಗಳನ್ನು ಪ್ರೌಢ ಶೈಲಿಯಲ್ಲಿಯೇ ಬರೆದಿರುವದರಿಂದ ಅವು ಸಾಮಾನ್ಯ ಜನರಿಗೂ ಬಾಲಕರಿಗೂ ಆಗತಕ್ಕಷ್ಟು ಪರಿಣಾಮಕಾರಕವಾಗಿರುವದಿಲ್ಲ. ಆದರಲ್ಲಿಯೂ ಭೂಗೋಲದಂಥ ನೀರಸವಾದ ವಿಷಯುವನ್ನಂತೂ ಮೇಲೆ ಹೇಳಿದಂತೆ ಬರೆಯದೆ ಹೃದಯಾಕರ್ಷಕವಾಗಿ ಬರೆಯುವದು ಅತ್ಯವಶ್ಯವಾದದ್ದು.

ಪ್ರಸ್ತುತ ಲೇಖಕರು ಈಗಾಗಲೇ ಕನ್ನಡದಲ್ಲಿ ಸಾಲೆಗೆ ಉಪಯೋಗವಾಗುವಂಥ ಎಷ್ಟೋ ಗ್ರಂಥಗಳನ್ನು ಸುಲಭ ಭಾಷೆಯಲ್ಲಿ ಬರೆದು ಕನ್ನಡಿಗರ ಆದರಕ್ಕೆ ಪಾತ್ರರಾದವರಿದ್ದು ಅವರು ಈ ಪುಸ್ತಕದಲ್ಲಿ ನಾವು ಹೇಳುವ ಕೊರತೆಯನ್ನು ಶಕ್ಯವಿದ್ದಮಟ್ಟಿಗೆ ಕಡಿಮೆ ಮಾಡಿರುವರೆಂಬ ಸಂಗತಿಯು ಓದುಗರಿಗೆ ಹೊಳೆಯದೆ ಇರದು.

ಚಿತ್ರಗಳ ಮೇಲೆ ಬಾಲಕರ ಪ್ರೀತಿಯು ವಿಶೇಷ. ಈ ತತ್ವವನ್ನನುಸರಿಸಿಯೇ ಈ ಗ್ರಂಥದಲ್ಲಿ ಬಾಲಕರ ಮನಸನ್ನು ಎಳೆಯುವಂತೆ ವಿಪುಲ ಚಿತ್ರಗಳನ್ನು ಸೇರಿಸಿರುವರು. ಈ ಸಂಗತಿಯು ಬರಹಗಾರರ ಉದ್ಯೋಗಶೀಲತೆಯನ್ನು ವ್ಯಕ್ತಮಾಡುತ್ತದೆ. ಈ ಹೊತ್ತಿಗೆಯೊಳಗಿನ ವಿಷಯುಗಳು ಬಾಲಕರಿಗೂ ಸಾಮಾನ್ಯರಿಗೂ ಮುಖ್ಯವಾಗಿ ಶಿಕ್ಷಕರಿಗೂ ಒಳ್ಳೇ ಉಪಯೋಗವಾಗುವಂತಿವೆ. ಬೆಲೆಯು ಪುಸ್ತಕದ ಮಾನದಿಂದ ಕಡಿಮೆಯಾಗಿದೆ. ಒಟ್ಟಾರೆ ಲೇಖಕರು ಈ ಪುಸ್ತಕವನ್ನು ಬರೆದು ಕನ್ನಡ ಕ್ರಮಿಕ ಸಾಹಿತ್ಯದಲ್ಲಿಯ ಒಂದು ಕೊರತೆಯನ್ನು ಹಿಂಗಿಸಿದುದಕ್ಕೆ ಕನ್ನಡಿಗರು ಅವರಿಗೆ ಋಣಿಯಾಗಿರಲಿಕ್ಕೆ ಸಾಕು. ಅಧ್ಯಾಪಕರು ಈ ಪುಸ್ತಕಕ್ಕೆ ವಿಶೇಷ ಸಹಾಯ ಮಾಡಿ, ಬರಹಗಾರರಿಗೆ ಉತ್ತೇಜನಕೊಡಬೇಕು. ಲೇಖಕರು ಇನ್ನು ಮುಂದೆ ಬರೆಯುವ ಗ್ರಂಥಗಳಲ್ಲಿ ಸ್ಟಾಂಡರ್ಡಿಗೆ ತಕ್ಕಂತೆ ವಿಷಯುಗಳನ್ನು ಸೇರಿಸಬೇಕೆಂದು ಸೂಚಿಸುವೆವು.

ಬೆಳಗಾಂವ
೨೧-೧೦-೧೯೩೧.

**M. Ramachandran,**
ಅಡ್ಮಿನಿಸ್ಟ್ರೇಟಿವ್ಹ ಆಫೀಸರ ಡಿ. ಸ್ಕೂ. ಬೋ.
ಬೆಳಗಾಂವಿ.

# ಆಭಾರ ಪ್ರದರ್ಶನ !

ಮೇಹರ್ಬಾನ ಸೀನಿಅರ ಅಸಿಸ್ಟಂಟ ಡೆಪ್ಯುಟಿ ಎಜ್ಯುಕೇಶನಲ್ ಇನ್‌ಸ್ಪೆಕ್ಟರರಾದ ಮಗದಾಳರಾಯರು ಈ ಪುಸ್ತಕದ ಹಸ್ತಲಿಖಿತ ಪ್ರತಿಯನ್ನು ಓದಿ, ಅಲ್ಲಲ್ಲಿಗೆ ತಕ್ಕ ಸುಧಾರಣೆಗಳನ್ನು ಮಾಡಲು ಸೂಚಿಸಿದ್ದರಿಂದ ನಮ್ಮ ಮೇಲೆ ಅವರ ಮಹದುಪಕಾರವಾಗಿರುವದು.

ನಮ್ಮ ಬಿನ್ನಹವನ್ನು ಮನ್ನಿಸಿ, ಮೇ. ಎಮ್. ರಾಮಚಂದ್ರನ್ ಬಿ. ಎ. ಬಿ. ಟಿ. ಅಡ್‌ಮಿನಿಸ್ಟ್ರೇಟಿವ್ಹ ಆಫಿಸರ ಡಿ. ಎಸ್. ಬಿ. ಬೆಳಗಾವಿ ಇವರು ತಮ್ಮ ಅಮೂಲ್ಯ ವೇಳೆಯನ್ನು ವೆಚ್ಚಮಾಡಿ, ನಮ್ಮ ಗ್ರಂಥಕ್ಕೆ ಮುನ್ನುಡಿಯನ್ನು ಒರೆದು ಕೊಟ್ಟುದಕ್ಕಾಗಿ, ನಾವು ಅವರಿಗೆ ತುಂಬಾ ಋಣಿಯಾಗಿದ್ದೇವೆ.

ಶ್ರೀಯುತ ಕ. ಗ. ವಿಜಾಪುರ ಪೇನ್ಶನರ ಮಾಸ್ತರ ಬೆಳಗಾಂವ ಇವರು ತಾಯ್ನುಡಿಯ ಸೇವೆಯಲ್ಲಿ ಹೆಸರು ಪಡೆದವರಿದ್ದು, ತಮ್ಮ ಆಯುಷ್ಯವನ್ನೆಲ್ಲ ಈ ವ್ಯವಸಾಯದಲ್ಲಿಯೇ ಕಳೆಯುತ್ತಿರುವದರಿಂದ ನಮ್ಮ ಬರಹದಲ್ಲಿಯ ತಪ್ಪು ತಡೆಗಳನ್ನು ತಿದ್ದಿ, ಮುದ್ರಣಕಾರ್ಯದಲ್ಲಿ ಸತತ ಶ್ರಮಬಟ್ಟು ನಮ್ಮನ್ನು ಋಣಿಯನ್ನಾಗಿ ಮಾಡಿರುವರು.

ಶ್ರೀಯುತ ಡಿ. ಪಿ. ಚೌಗುಲೆ. ಪ್ರೋಪ್ರಾಯಿಟರ ಶ್ರೀಮಹಾವೀರ ಮುದ್ರಣಾಲಯ ಬೆಳಗಾಂವಿ ಇವರು ತಮ್ಮ ಹಲವು ಬಗೆಯ ತೊಂದರೆಗಳನ್ನು ಬದಿಗೊತ್ತಿ ಗ್ರಂಥದ ಮುದ್ರಣವನ್ನು ಬಹು ಅಂದವಾಗಿಯೂ, ಅಚ್ಚುಕಟ್ಟಾಗಿಯೂ, ವೇಳೆಗೆ ಸರಿಯಾಗಿಯೂ ಮಾಡಿಕೊಟ್ಟರಲ್ಲದೆ ಬೇರೆ ಹಲವು ಬಗೆಯ ಸಹಾಯ ಮಾಡಿರುವದರಿಂದ ನಾವು ಅವರಿಗೆ ಋಣಿಯಾಗಿರುವೆವು.

ಶ್ರೀಯುತ ಎಸ್. ಮಹಾದೇವ ಫೋಟೋಗ್ರಾಫರ ಬೆಳಗಾಂವಿ ಇವರು ಕೆಲವು ಉಪಯುಕ್ತ ಭಾವಚಿತ್ರಗಳನ್ನು ಯೋಗ್ಯ ವೇಳೆಗೆ ಕಳುಹಿ ನಮಗೆ ಸಹಾಯಕರಾದರು.

ಕಿರ್ಲೋಸ್ಕರವಾಡಿಯ ಆರ್ಟ ಡಿಪಾರ್ಟಮೆಂಟನವರು ಬ್ಲಾಕುಗಳ ಕೆಲಸವನ್ನು ಅಂದವಾಗಿಯೂ, ಅಚ್ಚುಕಟ್ಟಾಗಿಯೂ ಮಾಡಿಕೊಟ್ಟು ನಮ್ಮ ಕಾರ್ಯಕ್ಕೆ ಕೈಲಾದಮಟ್ಟಿಗೆ ಸಹಾಯ ಮಾಡಿದರು.

ಶ್ರೀಯುತ ಕೃ. ರಾ. ಕೇಳಕರ ಇವರು ಬ್ಲಾಕುಗಳ ಕಾರ್ಯದಲ್ಲಿ ನಮಗೆ ಯೋಗ್ಯ ಸಹಾಯಕರಾದರು.

ಮೇಲ್ಕಾಣಿಸಿದ ಮಹನೀಯರೆಲ್ಲರ ಆಭಾರವನ್ನು ಎಷ್ಟು ಮನ್ನಿಸಿದರೂ ತೀರದು.

ಲೇಖಕರು.

## ವಿಷಯ.

(೧) ಜಿಲ್ಹೆಯ ಸಾಮಾನ್ಯವರ್ಣನೆ.

(೨) ಜಿಲ್ಹೆಯ ವಿಶೇಷವರ್ಣನೆ.

(೩) ಮುಂಬಯಿ ಕರ್ನಾಟಕದ ಸಾಮಾನ್ಯವರ್ಣನೆ.

---

## ಸೂಚನೆ.

ಶಿಕ್ಷಕ ಮಹಾಶಯರೇ! ತಾವುಗಳು ಭೂಗೋಲ ಪಾಠ ಹೇಳುವಾಗ ಈ ಪುಸ್ತಕದಲ್ಲಿರುವ ನಕಾಶಗಳಂತೆ ಕರೆ ಹಲಿಗೆಯ ಮೇಲೆ ಬಾಹ್ಯರೇಷೆಯ ನಕಾಶ ತೆಗೆದು, ಅದರಲ್ಲಿ ಎಲ್ಲ ಸಂಗತಿ ತೋರಿಸಿ ವಿದ್ಯಾರ್ಥಿಗಳ ಬಳಿಯಲ್ಲಿದ್ದ "ಬಾಹ್ಯರೇಷೆಯ ನಕಾಶಗಳ ಪುಸ್ತಕ" ದಲ್ಲಿ ಕ್ರಮದಿಂದ ತುಂಬಿಸುತ್ತ ಹೋದಲ್ಲಿ ವಿಷಯವು ಮನದಟ್ಟಾಗುವದೆಂದು ಮನವರಿಕೆಯುಂಟು.

ಟೀಪು:—ನಾವು ಬೆಳಗಾಂವ ಜಿಲ್ಹೆಯ ಬಾಹ್ಯರೇಷೆಯ ನಕಾಶಗಳ ಪುಸ್ತಕವನ್ನು ಮುದ್ರಿಸಿರುತ್ತೇವೆ. ಬೇಕಾದವರು ತರಿಸಿಕೊಳ್ಳಬಹುದು.

ಬೆಲೆ:—೧ ಆಣೆ ೩ ಪೈ.

---

## ಪುಸ್ತಕ ದೊರೆಯುವ ಸ್ಥಳ.

(೧) ಶ್ರೀ ಬಲಭೀಮ ಸ್ಟೋಅರ್ಸ ಕಾಗವಾಡ.

(೨) ಮಾಡರ್ನ ಬುಕ್ ಡಿಪೊ ಬೆಳಗಾಂವಿ.

(೩) ಶ್ರೀ ದತ್ತ ಬುಕ್ ಡಿಪೋ ಮಿರಜಿ.

ತಾಲೂಕಿನ ಸ್ಥಳಗಳಲ್ಲಿರುವ ಬುಕ್‌ಡಿಪೋಗಳಲ್ಲಾದರೂ ನಮ್ಮ ಎಲ್ಲ ಬಗೆಯ ಪುಸ್ತಕಗಳು ದೊರೆಯುತ್ತವೆ.

---




ಗ.ಬೀ. ಸುರಪುರ
ನಾ.ಹ. ಕೇಡಬಾಳಕರ.

# ಬೆಳಗಾಂವ ಜಿಲ್ಲೆಯ ರಾಜಕೀಯ ವಿಭಾಗಗಳು

# ೧ ನೆಯ ಭಾಗ.

# ಸಾಮಾನ್ಯವರ್ಣನೆ.

## ೧ನೆಯ ಪಾಠ.

### ತಾಲೂಕು, ಮೇರೆ, ಆಕಾರ, ವಿಸ್ತಾರ.

ಮುದ್ದು ವಿದ್ಯಾರ್ಥಿಗಳೇ! ಈ ಪುಸ್ತಕದ ಆರಂಭದಲ್ಲಿ ಕೊಟ್ಟ ರಾಜಕೀಯ ವಿಭಾಗಗಳನ್ನು ತೋರಿಸುವ ನಕಾಶೆಯನ್ನು ನೋಡಿರಿ. ಅದರಲ್ಲಿ ನಿಮ್ಮ ತಾಲೂಕು ಇರುವದಲ್ಲದೆ ಬೇರೆ ಏಳು ತಾಲೂಕುಗಳಿರುತ್ತವೆ. ಈ ಎಲ್ಲ ತಾಲೂಕುಗಳನ್ನು ಕೂಡಿಸಿ ಒಂದು ಜಿಲ್ಹೆಯನ್ನು ಮಾಡಿರುತ್ತಾರೆ. ಈ ಜಿಲ್ಹೆಗೆ ಬೆಳಗಾಂವ ಜಿಲ್ಹೆ ಎಂಬ ಹೆಸರು.

ಈ ಜಿಲ್ಹೆಯಲ್ಲಿರುವ ತಾಲೂಕುಗಳು:—೧ **ಅಥಣಿ**, ೨ **ಚಿಕ್ಕೋಡಿ**, ೩ **ಹುಕ್ಕೇರಿ**, ೪ **ಗೋಕಾಕ**, ೫ **ಬೆಳಗಾಂವ**, ೬ **ಖಾನಾಪುರ**, ೭ **ಬೈಲಹೊಂಗಲ**, ೮ **ಸವದತ್ತಿ**.

ಮಹಾಲು:— **ಚಂದಗಡ**

ಈ ಎಲ್ಲ ಭಾಗಗಳನ್ನು ಬಿಟ್ಟು ನಕಾಶೆಯಲ್ಲಿ ತೋರಿಸಿದ ಬೇರೆ ಬೇರೆ ಭಾಗಗಳು ಸಂಸ್ಥಾನಿಕರ ವಶದಲ್ಲಿರುತ್ತವೆ.

[ಬೆಳಗಾಂವ ಜಿಲ್ಹೆಯ ನಕಾಶೆಯನ್ನು ತೋರಿಸಿ] ಇಗೋ ನೋಡಿರಿ. ಇದು ನಮ್ಮ ಬೆಳಗಾಂವ ಜಿಲ್ಹೆಯು. ಇದರ ಸುತ್ತುಮುತ್ತಲು ಯಾವ ಯಾವ ಭಾಗಗಳಿರುತ್ತವೆ; ನೋಡುವಾ.

**ಮೇರೆ:**— **ಉತ್ತರಕ್ಕೆ**—ಸಾಂಗಲಿ, ಮಿರಜಿ, ಜತ್ತಜಹಾಗೀರ, ಸಾತಾರೆ ಜಿಲ್ಹೆ. ಪಶ್ಚಿಮಕ್ಕೆ— ಕರವೀರ ಇಲಾಖೆ, ಸಾವಂತವಾಡಿ ಸಂಸ್ಥಾನ, ಗೋವೆ ಪ್ರಾಂತ. ದಕ್ಷಿಣಕ್ಕೆ— ಕಾರವಾರ, ಧಾರವಾಡ ಜಿಲ್ಹೆಗಳು. **ಪೂರ್ವಕ್ಕೆ**— ರಾಮದುರ್ಗ, ಮುಧೋಳ, ಜಮಖಿಂಡಿ ಸಂಸ್ಥಾನಗಳು; ವಿಜಾಪುರ ಜಿಲ್ಹೆ.

**ಆಕಾರ:**—ಈ ಜಿಲ್ಹೆಯ ಆಕಾರವು ಸಾಧಾರಣವಾಗಿ ಚೌಕೋನದಂತೆ ತೋರುವದು.

ವಿಸ್ತಾರ:— ದಕ್ಷಿಣೋತ್ತರ ಉದ್ದಳತೆಯು ೮೫ ಮೈಲು; ಪೂರ್ವ-ಪಶ್ಚಿಮ ಅಗಲಳತೆಯು ೮೦ ಮೈಲು. ಕ್ಷೇತ್ರ—೪೬೧೩ ಚೌರಸ ಮೈಲು.

ಪ್ರಶ್ನ:— ೧ ಜಿಲ್ಹೆಯನ್ನು ಹೇಗೆ ಮಾಡಿರುವರು? ೨ ಜಿಲ್ಹೆಯಲ್ಲಿಯ ತಾಲೂಕುಗಳ ಹೆಸರು ಹೇಳಿರಿ. ೩ ಜಮಖಿಂಡಿ ಸಂಸ್ಥಾನವು ಜಿಲ್ಹೆಯ ಯಾವ ಒದಿಗಿರುವದು?

---

## ೨ನೆಯ ಪಾಠ.
## ಸ್ವಾಭಾವಿಕ ರಚನೆಯೂ, ವಿಭಾಗಗಳೂ.



ಬೆಳಗಾಂವ ಜಿಲ್ಹೆಯ ಪ್ರಾಕೃತಿಕ ವಿಭಾಗಗಳನ್ನು ತೋರಿಸುವ ನಕಾಶೆಯನ್ನು ನೋಡಿರಿ. ಇದರಲ್ಲಿ ಎಲ್ಲಕ್ಕೂ ಎತ್ತರವಾದ ಭಾಗವು ಪಶ್ಚಿಮ ಕಡೆಗಿರುವದೆಂದು ಕಂಡುಬರುವದು. ಪೂರ್ವದ ಕಡೆಗೆ ಮಾತ್ರ ಎತ್ತರವು ಕಡಿಮೆ ಕಡಿಮೆಯಾಗುತ್ತ ಹೋಗಿರುವದು. ನೀರು ಯಾವಾಗಲೂ ಇಳುಕಲಿನ ಕಡೆಗೇ ಹರಿಯುತ್ತದೆ. ಈ ನಕಾಶೆಯಲ್ಲಿ ತೋರಿಸಿದ ಬಹುತರ ಎಲ್ಲ ನದಿಗಳು ಸಾಮಾನ್ಯವಾಗಿ ಪೂರ್ವದ ಕಡೆಗೇ ಹರಿಯುತ್ತಿರುವದರಿಂದ ಈ ಜಿಲ್ಹೆಯ ಭೂಮಿಯು ಪೂರ್ವದ ಕಡೆಗೆ ಇಳುಕಲಾಗುತ್ತ ಹೋಗಿರುತ್ತದೆಂಬದು ಸಹಜವಾಗಿ ಗೊತ್ತಾಗುವದು. ಸಹ್ಯಾದ್ರಿಯು ಪಶ್ಚಿಮ ಬದಿಗಿದ್ದು ಅದರ ಸಾಲುಗಳು ಪೂರ್ವದ ಕಡೆಗೆ ಹೋಗಿರುತ್ತವೆ. ಈ ಸಾಲುಗಳ ಪೂರ್ವಭಾಗದಲ್ಲಿ ಗುಡ್ಡಗಳು ತೀರ ಕಡಿಮೆಯಾಗಿರುವದರಿಂದ ಆ ಪ್ರದೇಶವು ಬಹುತರ ಸಮನೆಲವುಳ್ಳದ್ದಾಗಿರುತ್ತದೆ. ಈ ಜಿಲ್ಹೆಯ ಪಶ್ಚಿಮಭಾಗದಲ್ಲಿ ಗುಡ್ಡಗಳು ಬಹಳ. ಪಶ್ಚಿಮದಿಂದ ಪೂರ್ವದ ಕಡೆಗೆ ಹೋದಹಾಗೆ ಗುಡ್ಡಗಳು ಕಡಿಮೆ ಕಡಿಮೆಯಾಗುತ್ತ ಹೋಗಿ ಸಮನೆಲದ ಪ್ರದೇಶವೇ ಹೆಚ್ಚಾಗಿರುವದು. ಈ ಎಲ್ಲ ಸಂಗತಿಗಳ ಮೇಲಿಂದ ಸ್ವಾಭಾವಿಕವಾದ ಮೂರು ವಿಭಾಗಗಳಾಗುತ್ತವೆ.

(೧) **ಪಶ್ಚಿಮಪಟ್ಟಿ**:— ಈ ಭಾಗದಲ್ಲಿ ಗುಡ್ಡಗಳು ವಿಶೇಷ. ಆದುದರಿಂದ ಇದಕ್ಕೆ ಸಹ್ಯಾದ್ರಿಯ ಪ್ರದೇಶ ಅಥವಾ ಮಲೆನಾಡು (ಮಲ್ನಾಡ) (ಮಲೆ= ಗುಡ್ಡ) ಎಂದೆನ್ನುವರು. ಇದರಲ್ಲಿ ಬೆಳಗಾಂವ, ಖಾನಾಪುರ ತಾಲೂಕುಗಳ ಪಶ್ಚಿಮಭಾಗವು ಮಾತ್ರ ಬರುವದು. ಈ ಭಾಗವು ಗುಡ್ಡಗಾಡು ಆಗಿರುವದರಿಂದ ಸಮನೆಲವು ಕಡಿಮೆ. ಇದರ ಅಗಲಳತೆಯು ಸರಾಸರಿ ೨೦ ಮೈಲು. ಎತ್ತರವು ಸಮುದ್ರಸಪಾಟಿಯಿಂದ ಸರಾಸರಿ ಅರ್ಧಮೈಲಿಗಿಂತ ತುಸು ಹೆಚ್ಚಾಗಬಹುದು. (ನಕಾಶೆಯಲ್ಲಿ ಕಾಣುವ ಕಪ್ಪು ಹಾಗು ಅಡ್ಡ-ಉದ್ದ ಗೆರೆಗಳಿಂದ ಕೂಡಿದ ಭಾಗಗಳು ಆಯಾ ಭಾಗದ ಭೂಮಿಗಿಂತ ಎತ್ತರವಾಗಿರುತ್ತವೆ.)

(೨) **ನಾಳ್ಕಪಟ್ಟಿ**:— ಈ ಭಾಗವು ಪಶ್ಚಿಮಪಟ್ಟಿಯ ನೆರೆಯ ಪ್ರದೇಶವಾಗಿರುವದರಿಂದ ಇದಕ್ಕೆ ಮಲೆನಾಡಿನ ಸೆರಗು ಎಂದೆನ್ನುವರು. ಇದರಲ್ಲಿ ಬೆಳಗಾಂವ, ಖಾನಾಪುರ ತಾಲೂಕುಗಳ ಪೂರ್ವಕಡೆಯ ಬಹುತರ ಎಲ್ಲ ಭಾಗವೂ, ಚಿಕ್ಕೋಡಿ, ಹುಕ್ಕೇರಿ, ಬೈಲಹೊಂಗಲ ತಾಲೂಕುಗಳ ಪಶ್ಚಿಮ ಕಡೆಯ ಸ್ವಲ್ಪ ಭಾಗವೂ ಬರುವವು. ಪಶ್ಚಿಮಕ್ಕೆ ಗುಡ್ಡಗಳು ಸಾಧಾರಣ

ವಾಗಿದ್ದು ಪೂರ್ವಕ್ಕೆ ಕಡಿಮೆಯಾಗುತ್ತ ಹೋಗಿರುತ್ತವೆ. ಗುಡ್ಡಗಳು ಕಡಿಮೆಯಾಗಿರುವದರಿಂದ ಸಮನೆಲವು ಹೆಚ್ಚಾಗಿರುವದು. ಇದರ ಅಗಲಳತೆಯು ಸರಾಸರಿ ೨೫ ಮೈಲು. ಎತ್ತರವು ಸಮುದ್ರಸಪಾಟಿಯಿಂದ ಸರಾಸರಿ ಅರ್ಧಮೈಲು ಆಗಬಹುದು.

(೩) **ಪೂರ್ವಪಟ್ಟಿ:—** ಈ ಭಾಗದಲ್ಲಿ ಗುಡ್ಡಗಳು ತೀರ ಕಡಿಮೆಯಾಗಿದ್ದು ಸಮನೆಲವು ಹೆಚ್ಚಾಗಿರುವದರಿಂದ ಇದಕ್ಕೆ ಬೈಲುಸೀಮೆ ಅಥವಾ ಬೆಳವಲು ಎಂದೆನ್ನುವರು. ಇದರಲ್ಲಿ ಚಿಕ್ಕೋಡಿ, ಹುಕ್ಕೇರಿ, ಬೈಲಹೊಂಗಲ ತಾಲೂಕುಗಳ ಪೂರ್ವಕಡೆಯು ಬಹುತರ ಎಲ್ಲ ಭಾಗವೂ, ಅಥಣಿ, ಗೋಕಾವಿ, ಸವದತ್ತಿ ತಾಲೂಕುಗಳೂ ಬರುವವು. ಇದರ ಅಗಲಳತೆಯು ಸರಾಸರಿ ೩೫ ಮೈಲು. ಎತ್ತರವು ಸಮುದ್ರಸಪಾಟಿಯಿಂದ ಸರಾಸರಿ ಅರ್ಧಮೈಲಿಗಿಂತ ತುಸು ಕಡಿಮೆಯಾಗಬಹುದು.

ಈ ಜಿಲ್ಹೆಯ ಎತ್ತರವು ಸಮುದ್ರಸಪಾಟಿಯಿಂದ ಸರಾಸರಿ ಅರ್ಧಮೈಲು ಆಗಿದ್ದು ಬಹಳ ಭಾಗವು ಸಮನೆಲವಾಗಿರುವದರಿಂದ ಇದು ತಪ್ಪಲಪ್ರದೇಶವೆನಿಸುವದು.

**ಪ್ರಶ್ನ:—**೧ ಈ ಜಿಲ್ಹೆಯ ಎತ್ತರ ಹಾಗು ಇಳುಕಲು ಯಾವ ಯಾವ ಕಡೆಗಿರುವದು? ಯಾಕೆ? ೨ ಈ ಜಿಲ್ಹೆಯಲ್ಲಾದ ಸ್ವಾಭಾವಿಕ ವಿಭಾಗಗಳೆಷ್ಟು? ಅವು ಯಾವವು? ೩ ಯಾವ ಭಾಗಕ್ಕೆ ಮಲೆನಾಡಿನ ಸೆರಗು ಎಂದೆನ್ನುವರು? ಯಾಕೆ? ೪ ಬೈಲುಸೀಮೆಯ ಒಗ್ಗೆ ಗೊತ್ತಾದ ಸಂಗತಿ ಹೇಳಿರಿ. ೫ ಈ ಜಿಲ್ಹೆಯು ಎಂಥ ಪ್ರದೇಶವೆನಿಸುವದು? ಯಾಕೆ?

---

## ೩ ನೆಯ ಪಾಠ.

## ಪರ್ವತವೂ, ಗುಡ್ಡಗಳೂ.

ಈ ಜಿಲ್ಹೆಯ ಪಶ್ಚಿಮಕಡೆಗೆ ಸಹ್ಯಾದ್ರಿಪರ್ವತವಿದ್ದು ಅದರಿಂದ ಹೊರಟ ಎರಡು ಮುಖ್ಯ ಸಾಲುಗಳು ಪೂರ್ವದ ಕಡೆಗೆ ಹೋಗಿರುತ್ತವೆ. ಅವುಗಳಲ್ಲಿ ದಕ್ಷಿಣದ ಸಾಲು ಬೆಳಗಾಂವಿಯ ಪಶ್ಚಿಮದಲ್ಲಿ ೨೪ ಮೈಲಿನ ಮೇಲೆಯೂ, ಉತ್ತರದ ಸಾಲು ಸಾವಂತವಾಡಿ ರಾಜ್ಯದಲ್ಲಿಯೂ ಆರಂಭವಾಗಿರುತ್ತವೆ.

**ದಕ್ಷಿಣದ ಸಾಲು:—** ಈ ಸಾಲಿನ ಉತ್ತರಕ್ಕೆ ಘಟಪ್ರಭೆಯೂ, ದಕ್ಷಿಣಕ್ಕೆ ಮಲಪ್ರಭೆಯೂ ಹರಿಯುತ್ತವೆ. ಇದು ಪೂರ್ವದ ಕಡೆಗೆ ಕಿರಿದಾಗುತ್ತ

ಹೋಗಿರುವದು. ಮಾರ್ಕಂಡೇಯು ಮೊದಲಾದ ಪ್ರವಾಹಗಳು ಇದನ್ನು ದಾಟಿ ಉತ್ತರಕ್ಕೆ ಹೋಗಿರುತ್ತವೆ. ಇದರಲ್ಲಿರುವ ಪರಸಗಡದ ಗುಡ್ಡವೂ, ಕಾಳಾನಂದಿಯು ಗುಡ್ಡವೂ ಹೆಸರಾಗಿರುತ್ತವೆ. ಇವು ಬೆಳಗಾಂವಿಯು ಪಶ್ಚಿಮದಲ್ಲಿದ್ದು ಮೇಲ್ಬದಿಗೆ ಪುರಾತನದ ಹಾಳು ಕೋಟೆಗಳುಂಟು.

**ಉತ್ತರದ ಸಾಲು:**— ಈ ಸಾಲಿನ ಉತ್ತರಕ್ಕೆ ಕೃಷ್ಣೆಯೂ, ದಕ್ಷಿಣಕ್ಕೆ ಘಟಪ್ರಭೆಯೂ ಹರಿಯುತ್ತವೆ. ಇದು ಪೂರ್ವದ ಕಡೆಗೆ ಕಿರಿದಾಗುತ್ತ ಹೋಗಿರುವದು. ಇದರಲ್ಲಿರುವ ಗುಡ್ಡಗಳ ಮೇಲಿದ್ದ ಮನೋಹರಗಡ, ವಲ್ಲಭಗಡ ಮೊದಲಾದ ಕೋಟೆಗಳು ಹಿಂದಕ್ಕೆ ಹೆಸರಾಗಿದ್ದವು.

**ಚಿಕ್ಕೋಡಿಯು** ಸಮೀಪದಲ್ಲಿರುವ ನಾಗರಾಳದ ಗುಡ್ಡ, ಮಲ್ಲಪ್ಪನ ಗುಡ್ಡ, ಜೋಗೀಗುಡ್ಡ, ನಿರ್ವಾಣೆಪ್ಪನ ಗಡ್ಡ ಮೊದಲಾದವುಗಳು ತಕ್ಕಮಟ್ಟಿಗೆ ಹೆಸರಾಗಿರುತ್ತವೆ

**ಕಿರಿಸಾಲು:**— ೧ ಮಹೀಪಾಳಗಡದ ಸಾಲು, ೨ ಬೈಲೂರಗುಡ್ಡದ ಸಾಲು, ೩ ಜಾಂಬೋಟಗುಡ್ಡದ ಸಾಲು ಎಂಬ ಮೂರು ಕಿರಿಸಾಲುಗಳುಂಟು. ಬೆಳಗಾಂವಿಯು ದಕ್ಷಿಣಕ್ಕೆ ಬೈಲೂರಗುಡ್ತದ ಸಾಲಿನಲ್ಲಿರುವ ಎಳ್ಳೂರಗುಡ್ಡವು ಎಲ್ಲಕ್ಕೂ ಹೆಚ್ಚು ಎತ್ತರವಿರುತ್ತದೆ.



**ವೈಜನಾಥನ ಗುಡ್ಡ.**

**ಬಿಡಿಗುಡ್ಡ**:—ಇವು ಜಿಲ್ಹೆಯಲ್ಲಿ ಎಲ್ಲ ಕಡೆಗೂ ಹೆಚ್ಚುಕಡಿಮೆ ಪ್ರಮಾಣದಿಂದ ಇರುತ್ತವೆ. ಇವುಗಳಲ್ಲಿ ಅಥಣಿ ತಾಲೂಕಿನ ಬೆಳವಣಕಿಗುಡ್ಡ, ಗೋಕಾಕ ತಾಲೂಕಿನ ಬಸ್ತೀಗುಡ್ಡ, ಮನ್ನೀಕೇರಿಯ ಗುಡ್ಡ, ನಾರಾಯಣನ ಗುಡ್ಡ, ಕಠಾರಿಗುಡ್ಡ, ಮೊದಲಾದವುಗಳೂ, ಬೆಳಗಾಂವ ತಾಲೂಕಿನಲ್ಲಿಯ ವೈಜನಾಥನ ಗುಡ್ಡವೂ, ಸವದತ್ತಿ ತಾಲೂಕಿನ ಎಲ್ಲಮ್ಮನ ಹಾಗು ನವಿಲತೀರ್ಥದ ಗುಡ್ಡಗಳೂ ಪ್ರಸಿದ್ಧವಾಗಿರುತ್ತವೆ.



ಎಲ್ಲಮ್ಮನ ಗುಡ್ಡ.

(೯ ನೆಯ ಪಾಠದಲ್ಲಿ ತೋರಿಸಿದ ಪ್ರಾಣಿ ಹಾಗು ಗಿಡಗಂಟಿಗಳ ನಕಾಶೆಯನ್ನು ನೋಡಿರಿ.) ಈ ಜಿಲ್ಹೆಯ ಪಶ್ಚಿಮಕಡೆಯ ಗುಡ್ಡಗಳ ಮೇಲೆ ಗಿಡಗಂಟಿಗಳು ದಟ್ಟಾಗಿರುವವು. ಅರಣ್ಯಗಳೂ, ಹುಲ್ಲು ಬೆಳೆಯುವ ಭೂಮಿಯೂ ಇರುತ್ತವೆ. ಪೂರ್ವದ ಕಡೆಗೆ ಹೋದಹಾಗೆ ಗಿಡಗಂಟಿಗಳು ಕಡಿಮೆ ಕಡಿಮೆಯಾಗುತ್ತ ಹೋಗಿರುವವು. ಮಧ್ಯಪಟ್ಟಿಯೊಳಗಿನ ಗುಡ್ಡಗಳ ಮೇಲೆ ಕೆಲಕೆಲವು ಕಡೆಗೆ ಗಿಡಗಂಟಿಗಳಿರುವವಲ್ಲದೆ ಹುಲ್ಲು ಬೆಳೆಯುವ ಭೂಮಿಯಿರುವದು. ಪೂರ್ವಪಟ್ಟಿಯೊಳಗಿನ ಗುಡಗಳ ಮೇಲೆ ಗಿಡಗಂಟಿಗಳು ತೀರ ಕಡಿಮೆ.

ಕೆಲಕೆಲವು ಗುಡ್ಡಗಳ ಮೇಲೆ ಗಿಡಗಳಿರುವದಿಲ್ಲ. ಅವುಗಳ ಮೇಲೆ ಹುಲ್ಲು ಸಹ ಚನ್ನಾಗಿ ಬೆಳೆಯುವದಿಲ್ಲ.

**ಗುಡ್ಡಗಳ ಉಪಯೋಗ:—** ೧ ಹವೆಯು ತಂಪಾಗಿರುವದು. ೨ ಮಳೆಯು ಹೆಚ್ಚಾಗುವದು. ೩ ಹೊಳೆ-ಹಳ್ಳಗಳು ಹುಟ್ಟುವವು. ೪ ಇಮಾರತಿಯು ಕಟ್ಟಿಗೆ, ಕಲ್ಲು, ಉರುವಲು, ಹುಲ್ಲು, ಹಣ್ಣುಹಂಪಲ ಮೊದಲಾದವುಗಳು ದೊರೆಯುವವು.

**ಪ್ರಶ್ನ:—** ೧ ಈ ಜಿಲ್ಹೆಯಲ್ಲಿ ಯಾವ ಪರ್ವತದ ಸಾಲುಗಳು ಹೇಗೆ ಹೋಗಿರುತ್ತವೆ? ೨ ದಕ್ಷಿಣದ ಸಾಲಿನ ಬಗ್ಗೆ ಗೊತ್ತಾದ ಸಂಗತಿ ಹೇಳಿರಿ. ೩ ಕಿರಿಸಾಲುಗಳು ಯಾವವು? ೪ ನಾರಾಯಣಗುಡ್ಡ, ವೈಜನಾಥನ ಗುಡ್ಡ, ಎಲ್ಲಮ್ಮನ ಗುಡ್ಡ ಇವು ಯಾವ ಯಾವ ತಾಲೂಕಿನಲ್ಲಿರುತ್ತವೆ? ೫ ಗುಡ್ಡಗಳಿಂದಾಗುವ ಉಪಯೋಗವೇನು?

---

## ೪ ನೆಯ ಪಾಠ

## ಹವೆ.

ಸಮನೆಲಕ್ಕಿಂತ ಎತ್ತರ ಪ್ರದೇಶದ ಹವೆಯ ಉಷ್ಣತೆಯು ಕಡಿಮೆಯಾಗಿರುತ್ತದೆ. ಬೆಳಗಾಂವ ಜಿಲ್ಹೆಯ ಪಶ್ಚಿಮಪಟ್ಟೆಯು ಬೇರೆ ಪಟ್ಟೆಗಳಿಗಿಂತ ಎತ್ತರವಾಗಿರುವದರಿಂದ ಅಲ್ಲಿಯ ಹವೆಯ ಉಷ್ಣತೆಯು ಕಡಿಮೆಯಾಗಿರುತ್ತದೆ. ಮತ್ತು ಆ ಪಟ್ಟೆಯಲ್ಲಿ ಗಿಡಗಂಟೆಗಳು ವಿಶೇಷವಾಗಿರುವದರಿಂದ ಹವೆಯು ತಂಪಾಗಿರುವದು.

ಈ ಜಿಲ್ಹೆಯ ಮಧ್ಯಪಟ್ಟೆಯೊಳಗೆ ಪಶ್ಚಿಮ ಪಟ್ಟೆಯಲ್ಲಿದ್ದಷ್ಟು ಗುಡ್ಡಗಳೂ, ಗಿಡಗಂಟೆಗಳೂ ಇರುವದಿಲ್ಲ. ಆದುದರಿಂದ ಈ ಪಟ್ಟೆಯ ಹವೆಯ ಉಷ್ಣತೆಯು ಪಶ್ಚಿಮ ಪಟ್ಟೆಯ ಹವೆಯ ಉಷ್ಣತೆಗಿಂತ ಹೆಚ್ಚಾಗಿರುತ್ತದೆ. ಅಂದರೆ ಈ ಪಟ್ಟೆಯ ಹವೆಯು ಸಾಧಾರಣ ಉಷ್ಣವಾಗಿರುತ್ತದೆ.

ಇನ್ನು ಉಳಿದ ಪೂರ್ವಪಟ್ಟೆಯು ಸಮನೆಲವುಳ್ಳದ್ದಾಗಿದ್ದು, ಅದರಲ್ಲಿ ಗುಡ್ಡಗಳೂ, ಗಿಡಗಂಟೆಗಳೂ ತೀರ ಕಡಿಮೆ. ಸೂರ್ಯನ ಉಷ್ಣತೆಯಿಂದ

ನೆಲವು ಕಾಯುವದರಿಂದ ಅದಕ್ಕೆ ಹೊಂದಿರುವ ಹವೆಯಾದರೂ ಕಾಯುವದು. ಆದುದರಿಂದ ಈ ಪಟ್ಟಿಯು ಹವೆಯು ಉಷ್ಣತೆಯು ಪಶ್ಚಿಮ ಹಾಗು



ಮಧ್ಯಪಟ್ಟಿಗಳ ಹವೆಯು ಉಷ್ಣತೆಗಿಂತ ಹೆಚ್ಚಾಗಿರುತ್ತದೆ. ಅಂದರೆ ಹವೆಯು ಉಷ್ಣವಾಗಿರುತ್ತದೆ.

ಜಿಲ್ಹೆಯ ಪಶ್ಚಿಮದಿಂದ ಪೂರ್ವದ ಕಡೆಗೆ ಹೋದ ಹಾಗೆ ಹವೆಯು ಹೆಚ್ಚು ಹೆಚ್ಚು ಉಷ್ಣವಾಗುತ್ತ ಹೋಗುವದೆಂದು ಕಂಡುಬರುವದು.

ಹವೆಯ ಉಷ್ಣತೆಯು ಕಡಿಮೆಯಾಗುತ್ತ ಹೋದ ಹಾಗೆ ಜನರಲ್ಲಿ ಕೆಲಸ ಮಾಡುವ ಲವಲವಿಕೆಯು ಹೆಚ್ಚಾಗುತ್ತ ಹೋಗುವದು. ಅವರಿಗೆ ಬೇಗ ದಣು ವಾಗುವದಿಲ್ಲ. ಆದರೆ ಹವೆಯ ಉಷ್ಣತೆಯು ಹೆಚ್ಚಾಗುತ್ತ ಹೋದ ಹಾಗೆ ಜನ ರಲ್ಲಿ ಕೆಲಸಮಾಡುವ ಲವಲವಿಕೆಯು ಕಡಿಮೆಯಾಗಿ ಬೇಗ ದಣುವಾಗುವದು. ಈ ದೃಷ್ಟಿಯಿಂದ ವಿಚಾರಿಸಿದರೆ ಪಶ್ಚಿಮ ಭಾಗದಲ್ಲಿಯ ಜನರಿಗೆ ಉದ್ಯೋಗ ಮಾಡಲು ಮನಸ್ಸಾಗುವದೆಂದೂ, ಬೇಗ ದಣುವಾಗುವದಿಲ್ಲೆಂದೂ, ಪೂರ್ವ ಭಾಗದಲ್ಲಿಯ ಜನರಿಗೆ ಉದ್ಯೋಗಮಾಡಲು ಆಲಸ್ಯವುಂಟಾಗಿ ಬೇಗ ದಣು ವಾಗುವದೆಂದೂ ಸ್ಪಷ್ಟವಾಗುವದು.

ಚಳಿಗಾಲದಲ್ಲಿ ಅಂದರೆ ಕಾರ್ತೀಕಮಾಸದಿಂದ ಮಾಘಮಾಸದ ಕೊನೆಯ ವರೆಗೆ ಹವೆಯು ಉತ್ತೇಜಕವಾಗಿರುವದು. ಬಿಸಿಲು ಕಡಿಮೆಯಾಗಿರುವದ ರಿಂದ ತಂಪು ಆಗಿರುವದು. ಇಂಥ ಹವೆಯಲ್ಲಿ ಕೆಲಸಮಾಡಲು ಹುರುಪು ಉಂಟಾಗುವದು. ತಿಂದ ಆಹಾರವು ಪಚನವಾಗುತ್ತದೆ. ಆದರೆ ಬೇಸಿಗೆಯಲ್ಲಿ ಅಂದರೆ ಫಾಲ್ಗುಣಮಾಸದಿಂದ ಜ್ಯೇಷ್ಠಮಾಸದವರೆಗೆ ಬಿಸಿಲು ಹೆಚ್ಚಾಗಿರು ವದರಿಂದ ಹವೆಯ ಉಷ್ಣತೆಯು ಹೆಚ್ಚಾಗಿ ವಿಶೇಷ ಗಮ್ಮು ಆಗಹತ್ತುವದು. ಆಗ ಆಲಸ್ಯವು ಹೆಚ್ಚಾಗಿ ಕೆಲಸಮಾಡಲು ಹುರುಪು ಉಂಟಾಗುವದಿಲ್ಲ ಮಧ್ಯಾ ಹ್ನದ ಬಿಸಿಲಿನಲ್ಲಂತೂ ಬಹುತರ ಎಲ್ಲ ಜನರು ಮನೆಬಿಟ್ಟು ಹೊರಬೀಳುವದಿಲ್ಲ. ಮುಂದೆ ಮಳೆಗಾಲವು ಆರಂಭವಾಗುವದು. ಆಗ ಹವೆಯಲ್ಲಿಯ ಉಷ್ಣತೆಯು ಕಡಿಮೆಯಾಗುವದು. ಆದ್ದರಿಂದ ಜನರಿಗೆ ಕೆಲಸ ಮಾಡಲು ಹುರುಪು ಉಂಟಾ ಗುವದು. ಕೆಲಸಮಾಡುವ ದೃಷ್ಟಿಯಿಂದ ಬೇಸಿಗೆಗಿಂತ ಮಳೆಗಾಲವು ಚನ್ನಾ ಗಿರುವದು. ಮಳೆಗಾಲವು ಜ್ಯೇಷ್ಠ ಮಾಸದಿಂದ ಆಶ್ವೀನಮಾಸದ ಕೊನೆಯ ವರೆಗೆ.

**ಪ್ರಶ್ನೆ:—** ೧ ಹವೆಯ ದೃಷ್ಟಿಯಿಂದ ಜಿಲ್ಹೆಯಲ್ಲಿ ಎಷ್ಟು ಭಾಗಗಳಾಗುವವು? ೨ ಪಶ್ಚಿಮ ಪಟ್ಟಿಯು ಹವೆಯು ತಂಪೂ, ಪೂರ್ವ ಪಟ್ಟಿಯ ಹವೆಯು ಉಷ್ಣವೂ ಯಾಕೆ? ೩ ಜಿಲ್ಹೆಯ ಯಾವ ಭಾಗದ ಜನರು ಹೆಚ್ಚು ದುಡಿಯುವಂಥವರಿರುವರು? ಯಾಕೆ?

---

## ೫ ನೆಯ ಪಾಠ.

### ಮಳೆ.

ಹೊಳೆ-ಹಳ್ಳ, ಕೆರೆ-ಬಾವಿ ಮೊದಲಾದವುಗಳಿಗೆ ಮಳೆಯಿಂದ ನೀರು ದೊರೆಯುವವು. ಆಕಾಶದಲ್ಲಿರುವ ಮೋಡಗಳಿಂದ ಮಳೆಯು ಬೀಳುವದು. ಆ ಮೋಡಗಳು ಎಲ್ಲಿಂದ ಬರುತ್ತವೆಂಬುದನ್ನು ವಿಚಾರಿಸುವಾ.

ನಮ್ಮ ದೇಶದ ನಕಾಶೆಯನ್ನು ನೋಡಿದರೆ ಅದರಲ್ಲಿ ನಮ್ಮ ಜಿಲ್ಹೆಯ ಪಶ್ಚಿಮಕ್ಕೆ ಕೆಲವು ಅಂತರದ ಮೇಲೆ ಅರಬೀ ಸಮುದ್ರವೂ, ಪೂರ್ವಕ್ಕೆ ಎಷ್ಟೋ ಅಂತರದ ಮೇಲೆ ಬಂಗಾಲದ ಉಪಸಾಗರವೂ ಕಾಣಿಸುವವು. ಅವುಗಳಲ್ಲಿಯ ನೀರು ಸೂರ್ಯನ ಉಷ್ಣತೆಯಿಂದ ಕಾಯ್ದು ಉಗಿಯಾಗಿ ಮೋಡಗಳುಂಟಾಗುವವು. ಆ ಮೋಡಗಳಿಗೆ ತಂಪು ತಗಲಿ, ಮಳೆಯಾಗುವದು.

ಪ್ರತಿವರ್ಷ ವೈಶಾಖಮಾಸದಿಂದ ನಮ್ಮ ಕಡೆಗೆ ಅರಬೀಸಮುದ್ರದ ಮೇಲಿಂದ ಬರುವ ಗಾಳಿಯು ಭರದಿಂದ ಬೀಸಹತ್ತುವದು. ಆ ಗಾಳಿಯಿಂದ ಮೋಡಗಳು ನಮ್ಮ ಕಡೆಗೆ ಬರುವವು. ಅವು ಬರುವಾಗ ಮೊದಲಿಗೆ ಸಹ್ಯಾದ್ರಿಯು ಹತ್ತುವದು. ಅದರ ಮೇಲಿನ ತಂಪು ಹವೆಯು ಅವುಗಳಿಗೆ ತಗಲಲು ಮಳೆಯಾಗುವದು. ಸಹ್ಯಾದ್ರಿಯು ಸಮೀಪದಲ್ಲಿರುವ ನಮ್ಮ ಜಿಲ್ಹೆಯ ಪಶ್ಚಿಮ ಪಟ್ಟಿಯಲ್ಲಿ ಎತ್ತರವಾದ ಗುಡ್ಡದ ಸಾಲುಗಳೂ, ಗಿಡಗಂಟಿಗಳೂ ಇರುವವಲ್ಲದೆ ಹವೆಯು ತಂಪಾಗಿರುವದರಿಂದ ಮಳೆಯು ಹೆಚ್ಚಾಗುವದು. ಮಧ್ಯ ಪಟ್ಟಿಯಲ್ಲಿ ಗುಡ್ಡಗಳೂ, ಗಿಡಗಂಟಿಗಳೂ ಕಡಿಮೆಯಾಗಿದ್ದು ಹವೆಯು ಸಾಧಾರಣ ಉಷ್ಣ; ಅದರಿಂದ ಮಳೆಯು ಪಶ್ಚಿಮಪಟ್ಟಿಗಿಂತ ಕಡಿಮೆಯಾಗುವದು. ಪೂರ್ವಪಟ್ಟಿಯಲ್ಲಿ ಗುಡ್ಡಗಳೂ, ಗಿಡಗಂಟಿಗಳೂ ತೀರ ಕಡಿಮೆ ಇದ್ದು ಹವೆಯು ಉಷ್ಣವಾಗಿರುವದರಿಂದ, ಮಳೆಯು ಮಧ್ಯಪಟ್ಟಿಗಿಂತ ಕಡಿಮೆಯಾಗುವದು. ಕೆಲಕೆಲವು ಕಡೆಗಂತೂ ಮಳೆಯು ತೀರ ಕಡಿಮೆಯಾಗುವದು.

ಪಶ್ಚಿಮದಿಂದ ಬರುವ ಮಳೆಯು ಪಶ್ಚಿಮಭಾಗದಲ್ಲಿ ಹೆಚ್ಚಾಗುವದಲ್ಲದೆ ಪೂರ್ವಕ್ಕೆ ಹೋದಹಾಗೆ ಕಡಿಮೆಯಾಗುತ್ತ ಹೋಗುವದು. ಈ ಮಳೆಯು ಸುಮಾರು ಭಾದ್ರಪದದ ಮಧ್ಯದ ವರೆಗಿರುವದು. ಇದಕ್ಕೆ " ಮುಂಗಾರಿಮಳೆ " ಎನ್ನುವರು.

ಪೂರ್ವಕ್ಕಿರುವ ಬಂಗಾಲ ಉಪಸಾಗರದ ಮೇಲಿಂದ ಬರುವ ಗಾಳಿಗಳು ಭಾದ್ರಪದ, ಅಶ್ವೀನ ಮಾಸಗಳಲ್ಲಿ ಬೀಸತೊಡಗಲು ಅವುಗಳ ಸಂಗಡ ಮೋಡಗಳು ಬರುವವು. ಆ ಮೋಡಗಳು ದೂರಿಂದ ಬರುವ ಮೂಲಕ ಅವುಗಳಿಂದಾಗುವ ಮಳೆಯು ಮುಂಗಾರಿ ಮಳೆಯಷ್ಟಾಗುವದಿಲ್ಲ. ಪೂರ್ವಪಟ್ಟಿಯಲ್ಲಿ ಸಾಧಾರಣವಾಗುವದಲ್ಲದೆ ಪಶ್ಚಿಮಕ್ಕೆ ಹೋದಹಾಗೆ ಕಡಿಮೆ ಕಡಿಮೆಯಾಗುತ್ತ ಹೋಗುವದು. ಇದಕ್ಕೆ " ಹಿಂಗಾರಿಮಳೆ " ಎನ್ನುವರು. ಪೂರ್ವಪಟ್ಟಿಯು ನೀರೂ, ಬೆಳೆಗಳೂ ಈ ಮಳೆಯನ್ನವಲಂಬಿಸಿರುತ್ತವೆ. ಮಧ್ಯಪಟ್ಟಿಗಾದರೂ ಈ ಮಳೆಯು ಅವಶ್ಯಕತೆಯುಂಟು. ಜಿಲ್ಹೆಯ ಪಶ್ಚಿಮ ಬದಿಗೆ ಮುಂಗಾರಿಮಳೆಯಿಂದಲೂ, ಪೂರ್ವಬದಿಗೆ ಹಿಂಗಾರಿಮಳೆಯಿಂದಲೂ ನೀರಿನ ಪೂರೈಕೆಯಾಗುವದು.



ಮಳೆ ಅಳೆಯುವ ಯಂತ್ರ.

ನಿಯಮಿತ ಆಕಾರದ ಬಾಯಿಯಿದ್ದ ಪಾವಿನ ಆಕಾರದ ಪಾತ್ರೆಯನ್ನಾಗಲಿ, ಮೇಲ್ಬದಿಯ ಮುಚ್ಚಳ ತೆಗೆದ ಕಲ್ಲೆಣ್ಣೆಯ ಡಬ್ಬಿಯನ್ನಾಗಲಿ ಮಳೆಬೀಳುವಾಗ ಬೈಲು ಸ್ಥಳದಲ್ಲಿಡಬೇಕು. ಬಳಿಕ ಅದರಲ್ಲಿಯ ನೀರನ್ನು ಇಂಚಪಟ್ಟಿಯಿಂದ ಅಳೆಯಲು ಆ ನೀರಿನ ಎತ್ತರವು ಎಷ್ಟು ಇಂಚು ಆಗುವದೋ ಅಷ್ಟು ಇಂಚು ಮಳೆಯಾಯಿತೆಂದೆನ್ನುವರು. ಇತ್ತಿತ್ತಲಾಗಿ ಮಳೆಯನ್ನು ಅಳೆಯುವದರ ಸಲುವಾಗಿ ಒಂದು ಯಂತ್ರವನ್ನು ಸಿದ್ಧಮಾಡಿರುವರು. ಅದಕ್ಕೆ ' ಮಳೆ ಅಳೆಯುವ ಯಂತ್ರ " ಎಂದೆನ್ನುವರು.

೪ ನೆಯ ಪಾಠದಲ್ಲಿಯ ಹವೆ-ಮಳೆಗಳನ್ನು ತೋರಿಸುವ ನಕಾಶೆಯನ್ನು ನೋಡಿರಿ. ಪಶ್ಚಿಮಪಟ್ಟಿಯಲ್ಲಿ ಸರಾಸರಿ ೫೦ರಿಂದ ೧೦೦ ಇಂಚು, ಮಧ್ಯಪಟ್ಟಿಯಲ್ಲಿ ಸರಾಸರಿ ೨೫ರಿಂದ ೫೦ ಇಂಚು, ಪೂರ್ವಪಟ್ಟಿಯಲ್ಲಿ ಸರಾಸರಿ ೧೫ರಿಂದ ೨೫ ಇಂಚು ಮಳೆಯಾಗುವದು. ಒಮ್ಮೊಮ್ಮೆ ಈ ಮಳೆಯ ಮಾನದಲ್ಲಿ ಹೆಚ್ಚುಕಡಿಮೆ ಆಗುವದುಂಟು. ಈ ಜಿಲ್ಹೆಯ ವರ್ಷದ ಮಳೆಯು ಸರಾಸರಿ ೪೦ ಇಂಚಿಗಿಂತ ಹೆಚ್ಚಾಗಿರುವದು

**ಪ್ರಶ್ನ:**— ೧ ನಮ್ಮ ಕಡೆಗೆ ಯಾವಾಗ ಮಳೆಯಾಗುವದು? ಯಾಕೆ? ೨ ಪೂರ್ವಪಟ್ಟಿಗಿಂತ ಪಶ್ಚಿಮಪಟ್ಟಿಯಲ್ಲಿ ಮಳೆ ಹೆಚ್ಚಾಗುವ ಕಾರಣವೇನು? ೩ ಮುಂಗಾರಿ, ಹಿಂಗಾರಿ ಮಳೆಗಳೆಂದರೇನು? ೪ ಮಳೆಯನ್ನು ಹೇಗೆ ಅಳೆಯುವರು? ೫ ಮಧ್ಯಪಟ್ಟಿಯಲ್ಲಿ ಎಷ್ಟು ಇಂಚು ಮಳೆಯಾಗುವದು?

---

## ೬ ನೆಯ ಪಾಠ.

### ಹೊಳೆಗಳು

(೩ನೆಯ ಪಾಠದಲ್ಲಿಯ ಪ್ರಾಕೃತಿಕ ವಿಭಾಗಗಳ ನಕಾಶೆಯಲ್ಲಿ ತೋರಿಸಿದ ಹೊಳೆಗಳನ್ನು ನೋಡಿರಿ.) ಜಿಲ್ಹೆಯ ಉತ್ತರಭಾಗದಲ್ಲಿ ಕೃಷ್ಣೆಯೂ, ಮಧ್ಯಭಾಗದಲ್ಲಿ ಘಟಪ್ರಭೆಯೂ, ದಕ್ಷಿಣಭಾಗದಲ್ಲಿ ಮಲಪ್ರಭೆಯೂ ಹರಿಯುತ್ತಿರುವವಲ್ಲದೆ, ದೂಧಗಂಗೆ, ವೇದಗಂಗೆ, ಹರಣಕಾಶಿ, ಮಾರ್ಕಂಡೇಯ, ತಾಮ್ರಪರ್ಣಿ ಮೊದಲಾದ ಚಿಕ್ಕ ಹೊಳೆಗಳಾದರೂ ಅಲ್ಲಲ್ಲಿ ಹರಿಯುತ್ತಿರುವವು ಇವೆಲ್ಲವುಗಳ ಹುಟ್ಟು ಪಶ್ಚಿಮಭಾಗದಲ್ಲಿರುವದು



ಹರಗೋಲು.



**ಉಗಿಬಂಡಿಯ ಪೂಲು.**

**ಕೃಷ್ಣಾ:**— ಸಾತಾರೆ ಜಿಲ್ಲೆಯಲ್ಲಿರುವ ಸಹ್ಯಾದ್ರಿಯ ಅತ್ಯುನ್ನತ ಪ್ರದೇಶ ವಾದ ಮಹಾಬಳೇಶ್ವರದಲ್ಲಿ ಹುಟ್ಟಿ, ಸಾತಾರೆ ಜಿಲ್ಹೆಯೊಳಗಿಂದ ಈ ಜಿಲ್ಹೆಯಲ್ಲಿ ವಾಯುವ್ಯ ದಿಕ್ಕಿನಿಂದ ಸೇರಿ ಚಿಕ್ಕೋಡಿ, ಅಥಣಿ ತಾಲೂಕುಗಳೊಳಗಿಂದ ಪೂರ್ವಕ್ಕೆ ಹರಿಯುತ್ತ ಹೋಗಿ ಮಚ್ಛಲಿಪಟ್ಟಣದ ಹತ್ತರ ಬಂಗಾಲದ ಉಪಸಾಗರಕ್ಕೆ ಕೂಡಿರುವದು. ಧಡದಲ್ಲಿ ಹಿಂದೂ ಜನರ ಪವಿತ್ರವಾದ ಕ್ಷೇತ್ರ ಗಳಿರುತ್ತವೆ ಮಳೆಗಾಲದಲ್ಲಿ ನೀರು ಹೆಚ್ಚಾಗಿರುವದರಿಂದ ಜನರು ದಾಟಿ ಹೋಗಲು ಹರಗೋಲುಗಳನ್ನು ಉಪಯೋಗಿಸುವರು. ಕುಡಚಿಯ ಹತ್ತರ ಉಗಿಬಂಡಿ ಹಾಯುವ ದೊಡ್ಡ ಪೂಲು ಉಂಟು. ದಂಡೆಯ ಪ್ರದೇಶವು ಬಹಳ ಬೆಳೆಯುಳ್ಳದ್ದಿರುವದು. ಬಲಗಡೆಯಿಂದ ದೂಧಗಂಗೆಯು ಬಂದು ಕೂಡಿರುವದು. ನೀರು ಬಹು ಆರೋಗ್ಯಕರವು.

**ದೂಧಗಂಗಾ:**—ಸಹ್ಯಾದ್ರಿಯಲ್ಲಿ ಹುಟ್ಟಿ ಚಿಕ್ಕೋಡಿ ತಾಲೂಕಿನಲ್ಲಿ ಹರಿದು ಕಲ್ಲೋಳ್ಳಿಯ ಹತ್ತರ ಕೃಷ್ಣೆಗೆ ಕೂಡುತ್ತದೆ. ದಂಡೆಯ ಭೂಮಿಯು ಬೆಳೆಯುಳ್ಳದ್ದಿರುವದು.

**ವೇದಗಂಗಾ:**—ಸಹ್ಯಾದ್ರಿಯಲ್ಲಿ ಹುಟ್ಟಿ ಚಿಕ್ಕೋಡಿ ತಾಲೂಕಿನಲ್ಲಿ ಹರಿದು ಭೋಜದ ಹತ್ತರ ದೂಧಗಂಗೆಗೆ ಕೂಡುತ್ತದೆ.

**ಘಟಪ್ರಭಾ:**— ಸಹ್ಯಾದ್ರಿಯಲ್ಲಿರುವ ರಾಮಘಾಟದಲ್ಲಿ ಹುಟ್ಟಿ ಹುಕ್ಕೇರಿ, ಗೋಕಾಕ ತಾಲೂಕುಗಳೊಳಗಿಂದ ಪೂರ್ವಕ್ಕೆ ಹರಿಯುತ್ತದೆ.

ಎಡಗಡೆಯಿಂದ ಹರಣಕಾಶಿ, ಬಲಗಡೆಯಿಂದ ತಾಮ್ರಪರ್ಣಿ, ಮಾರ್ಕಂಡೇಯ ನದಿಗಳು ಬಂದು ಕೂಡಿರುತ್ತವೆ. ಘಟಪ್ರಭೆಗೆ ಧೂಪದಾಳದ ಹತ್ತರ ಗೋಡೆ



ಘಟಪ್ರಭೆಗೆ ಕಟ್ಟಿದ ಗೋಡೆ.



ಗೋಕಾಕ ತಡಸಲು.

ಕಟ್ಟಿ ಕಾಲುವೆಯನ್ನು ತೆಗೆದು ಒಕ್ಕಲತನಕ್ಕೆ ನೀರಿನ ಅನುಕೂಲತೆಯನ್ನುಂಟು ಮಾಡಿರುವರು. ಕಾಲುವೆಯಿಂದ ಸಾವಿರಾರು ಎಕರೆ ಭೂಮಿಯು ನೀರುಣ್ಣು ವದು. ಸಮೀಪದಲ್ಲಿ ಉಗಿಬಂಡಿಯ ಪೂಲು ಉಂಟು. ಕೊಣ್ಣೂರ, ಗೋಕಾಕ ಇವುಗಳ ನಡುವಿರುವ ತಡಸಲು ನೋಡತಕ್ಕಂಥಾದ್ದಿರುವದು. ಅಲ್ಲಿಯೇ ನೀರಿನ ಶಕ್ತಿಯಿಂದ ನಡೆಯುವ ನೂಲಿನ ಗಿರಣಿಯುಂಟು. ಹೊಳೆಯ ದಂಡೆಯ ಪ್ರದೇಶವು ಬೆಳೆಯುಳ್ಳದ್ದಿರುವದು. ಇದು ಬಾಗಲಕೋಟೆ ತಾಲೂಕಿನಲ್ಲಿ ಕೂಡಲ ಸಂಗಮದ ಹತ್ತರ ಕೃಷ್ಣೆಗೆ ಕೂಡುತ್ತದೆ.

**ತಾಮ್ರಪರ್ಣಿ**:—ರಾಮಘಟ್ಟದಲ್ಲಿ ಹುಟ್ಟಿ ಬೆಳಗಾಂವ ತಾಲೂಕಿನೊಳಗಿಂದ ಹರಿದು ದಡ್ಡಿಯ ಹತ್ತರ ಘಟಪ್ರಭೆಗೆ ಕೂಡುತ್ತದೆ.

**ಮಾರ್ಕಂಡೇಯ**:—ಬೆಳಗಾಂವ ತಾಲೂಕಿನ ಸಹ್ಯಾದ್ರಿಯ ಶಾಖೆಯಲ್ಲಿ ಹುಟ್ಟಿ ಬೆಳಗಾಂವ, ಗೋಕಾಕ ತಾಲೂಕುಗಳಲ್ಲಿ ಹರಿದು ಗೋಕಾಕದ ಹತ್ತರ ಘಟಪ್ರಭೆಗೆ ಕೂಡುತ್ತದೆ.

**ಮಲಪ್ರಭಾ**:—ಖಾನಾಪೂರ ತಾಲೂಕಿನಲ್ಲಿ ಕುಳಕುಂಬಿಯ ಹತ್ತರ ಹುಟ್ಟಿ ಖಾನಾಪೂರ, ಬೈಲಹೊಂಗಲ, ಸವದತ್ತಿ ತಾಲೂಕುಗಳೊಳಗಿಂದ ಪೂರ್ವಕ್ಕೆ ಹರಿಯುತ್ತದೆ. ಖಾನಾಪೂರದ ಸಮೀಪದಲ್ಲಿ ಉಗಿಬಂಡಿಯ ಪೂಲು ಉಂಟು. ಈ ಹೊಳೆಯು ಸವದತ್ತಿ ತಾಲೂಕಿನಲ್ಲಿ ಮನ್ನೊಳ್ಳಿಯ ಹತ್ತರ ಗುಡ್ಡವನ್ನೊಡೆದು ಮುಂದಕ್ಕೆ ಹೋಗಿರುವದು. ಅಲ್ಲಿ ನವಿಲತೀರ್ಥವೆಂಬದೊಂದು ಮಡುವಿರುವದು. ದಂಡೆಯ ಭೂಮಿಯು ಬೆಳೆಯುಳ್ಳದ್ದು. ಇದು ವಿಜಾಪೂರ ಜಿಲ್ಹೆಯಲ್ಲಿರುವ ಕಪ್ಪಡಿಸಂಗಮದ ಹತ್ತರ ಕೃಷ್ಣೆಗೆ ಕೂಡುತ್ತದೆ.

**ನದಿಗಳ ಉಪಯೋಗ**:— ೧ ದನಗಳಿಗೂ, ಮನುಷ್ಯರಿಗೂ, ಬೆಳೆಗಳಿಗೂ ನೀರು ದೊರೆಯುತ್ತವೆ. ೨ ದಂಡೆಯಲ್ಲಿ ರೇವೆಯ ಬೆಳೆಯುಳ್ಳ ಭೂಮಿಯು ಸಿದ್ಧವಾಗುವದು. ೩ ಒಕ್ಕಲತನದ ಸಲುವಾಗಿ ಕಾಲುವೆಗಳನ್ನು ತೆಗೆಯಲು ಅನುಕೂಲವಾಗುವದು. ೪ ಹೊಲಸು ಹರಿದುಹೋಗುವದರಿಂದ ಸ್ವಚ್ಛತೆ ಉಳಿಯುವದು. ೫ ರೇವೆಯಿಂದ ಇಟ್ಟಂಗಿ ಹಂಚುಗಳು ಸಿದ್ಧವಾಗುವವು. ೬ ಕೆಲಜನರು ಮೀನು ಹಿಡಿದು ಹೊಟ್ಟೆಹೊರಕೊಳ್ಳುವರು.

**ಪ್ರಶ್ನೆ**:— ೧ ಜಿಲ್ಲೆಯ ಯಾವ ಭಾಗದಲ್ಲಿ ಹೊಳೆಗಳು ಹುಟ್ಟಿರುತ್ತವೆ? ಯಾಕೆ? ೨ ಮುಖ್ಯ ಹೊಳೆಗಳು ಯಾವವು? ೩ ಕೃಷ್ಣಾ ನದಿಯ ಬಗ್ಗೆ ಗೊತ್ತಾದ ಸಂಗತಿ ಹೇಳಿರಿ. ೪ ಯಾವ ಹೊಳೆಗೆ ತಡಸಲು ಉಂಟು. ೫ ನದಿಗಳಿಂದಾಗುವ ಉಪಯೋಗವೇನು?

---

## ೭ ನೆಯ ಪಾಠ.

### ಭೂಮಿ.



ಪರ್ವತ, ಗುಡ್ಡ, ದಿನ್ನೆ ಇವುಗಳ ಮೇಲೆ ಮಳೆ ಬೀಳಲು ಆ ನೀರು ಇಳುಕಲಿನ ಕಡೆಗೆ ಹರಿಯುಹತ್ತುವದು. ಆ ನೀರಿನ ಸಂಗಡ ಕಲ್ಲು, ಮಣ್ಣು ಮೊದಲಾದವುಗಳು ಹರಿದುಬಂದು ಹೊಳೆ-ಹಳ್ಳಗಳ ಪೂರಗಳ ಸಂಗಡ ಕೂಡಿ ಕೊಳ್ಳುವವು. ಕೆಲ ಮಣ್ಣು ಗುಡ್ಡ ದಿನ್ನೆಗಳ ಬುಡದಲ್ಲಿ ಕೂಡಬೀಳುವದು. ಆ ಸ್ಥಳದಲ್ಲಿ ನೀರಿನ ಸೆಳವು ಹೆಚ್ಚಾಗಿರುವದರಿಂದ ಮಣ್ಣಿನ ಥರವು ದಪ್ಪಾಗಿರುವದಿಲ್ಲ. ಹೊಳೆ-ಹಳ್ಳಗಳ ಸಂಗಡ ಹರಿಯುತ್ತ ಹೋಗುವ ಮಣ್ಣು ಅವುಗಳ ದಂಡೆಗಳಲ್ಲಿ ಕೂಡಬೀಳುವದು. ಈ ರೀತಿ ಮಣ್ಣು ಕೂಡಬೀಳುವದರಿಂದ ಅದರ ಥರವು ದಪ್ಪಾಗುವದು. ಹೊಳೆ-ಹಳ್ಳಗಳ ದಂಡೆಗಳಲ್ಲಿ ಸಿದ್ಧವಾದ ಭೂಮಿಗೆ “ ರೇವೆಯ ಭೂಮಿ ” ಎನ್ನುವರು. ಈ ಬಗೆಯ ಭೂಮಿಯು ಮೇಲಾದ ಭೂಮಿ ಎನಿಸುವದು.

ಈ ಪ್ರಕಾರ ಗುಡ್ಡಗಳ ಮೇಲಿನ ಮಣ್ಣು ಹರಿದುಹೋಗುವದರಿಂದ ಆ ಸ್ಥಳದ ಮಣ್ಣು ಕಡಿಮೆಯಾಗಹತ್ತುವದು. ಸಮತಳ ( ಸಪಾಟ )ವಾದ ಭೂಮಿಯ ಮೇಲಿನ ಮಣ್ಣು ಹರಿದುಹೋಗದೆ ಸ್ಥಿರವಾಗಿ ಉಳಿಯುವದು.

ಪಶ್ಚಿಮಪಟ್ಟಿಯಲ್ಲಿ ಗುಡ್ಡಗಳು ಹೆಚ್ಚಾಗಿರುವದರಿಂದಲೂ, ಮಳೆಯು ವಿಶೇಷ ಬೀಳುತ್ತಿರುವದರಿಂದಲೂ, ಮಣ್ಣು ಹರಿದುಹೋಗುವದರಿಂದಲೂ, ಅಲ್ಲಿ ಭೂಮಿಯ ಥರವು ದಪ್ಪಾಗಿರುವದಿಲ್ಲ. ಈ ಪಟ್ಟಿಯ ಪೂರ್ವಭಾಗದಲ್ಲಿ ಗುಡ್ಡಗಳ ನಡುವೆ ಕೆಲವು ಸಪಾಟಪ್ರದೇಶಗಳಿದ್ದು ಅವುಗಳ ಭೂಮಿಯ ಥರವು ಕೆಲಮಟ್ಟಿಗೆ ದಪ್ಪಾಗಿರುತ್ತದೆ. ಇಲ್ಲಿಯ ಭೂಮಿಯು ಕೆಂಪು. ಇದು ಅಷ್ಟೊಂದು ಕಸುವುಳ್ಳದ್ದಲ್ಲ.

ಮಧ್ಯಪಟ್ಟಿಯಲ್ಲಿ ಗುಡ್ಡಗಳು ಕಡಿಮೆ. ಸಪಾಟವಾದ ಭೂಮಿಯು ಹೆಚ್ಚಾಗಿರುವದು. ಈ ಭಾಗದಲ್ಲಿ ಬಹುತರ ಎಲ್ಲ ನದಿಗಳ ದಂಡೆಯ ಪ್ರದೇಶವು ಸೇರುವದರಿಂದ ಮೇಲಾದ ಭೂಮಿಯದಾಗಿರುವದು. ಅದು ಕೆಂಪು, ಕೇಪು ಕೂಡಿದ ಎರೆ, ಕರೆ ಹೀಗೆ ಇರುತ್ತದೆ. ಅದು ಕಸುವುಳ್ಳದ್ದಿರುವದರಿಂದಲೂ, ನೀರಿನ ಪೂರೈಕೆಯು ಸಾಕಷ್ಟಾಗುವದರಿಂದಲೂ ಬೇರೆ ಭಾಗಗಳಿಗಿಂತ ಹೆಚ್ಚು ಬೆಳೆಯುಳ್ಳದ್ದಾಗಿರುವದು.

ಪೂರ್ವಪಟ್ಟಿಯಲ್ಲಿ ಗುಡ್ಡಗಳು ತೀರ ಕಡಿಮೆ. ಸಪಾಟವಾದ ಭೂಮಿಯು ಹೆಚ್ಚಾಗಿರುವದು. ಈ ಭಾಗದಲ್ಲಿ ನದಿಗಳ ದಂಡೆಯ ಪ್ರದೇಶವು ಮೇಲಾದ

2

ಭೂಮಿಯಾಗಿರುವದಲ್ಲದೆ ಉಳಿದ ಕಡೆಯಲ್ಲಿ ಕೆಂಪು, ಉಸುಕುಳ್ಳ ಕೆಂಪು, ಕರೆ ಹೀಗೆ ಭೂಮಿಗಳಿರುವವು. ಇಲ್ಲಿಯು ಭೂಮಿಯು ಕಸುವುಳ್ಳದ್ದಿದ್ದರೂ ಮಳೆಯು ಕಡಿಮೆಯಾಗುತ್ತಿರುವದರಿಂದ ಮಧ್ಯಪಟ್ಟೆಯಷ್ಟು ಬೆಳೆಯುಳ್ಳದ್ದಲ್ಲ.

ಪ್ರಶ್ನ:—೧ ಜಿಲ್ಹೆಯ ಯಾವ ಭಾಗದ ಭೂಮಿಯು ಥರವು ದಪ್ಪಾಗಿರುವದು? ಯಾಕೆ? ೨ ರೇವೆಯು ಭೂಮಿಯು ಹೇಗೆ ಉಂಟಾಗುವದು? ೩ ಮೇಲಾದ ಭೂಮಿಯು ಎಲ್ಲಿರುವದು? ಯಾಕೆ? ೪ ಮಧ್ಯಪಟ್ಟೆಯು ಹೆಚ್ಚಿಗೆ ಬೆಳೆಯುಳ್ಳದ್ದು ಯಾಕೆ? ೫ ಜಿಲ್ಹೆಯಲ್ಲಿ ಯಾವ ಯಾವ ಬಗೆಯ ಭೂಮಿಯು ಕಂಡುಬರುವದು?

---

## ೮ನೆಯ ಪಾಠ.

### ಬೆಳೆಗಳು.

ನಮ್ಮ ಜಿಲ್ಹೆಯಲ್ಲಿ ಬೆಳೆಗಳ ಹಂಗಾಮುಗಳು ಎರಡು. ಮಳೆಗಾಲ ಆರಂಭವಾದ ಕೂಡಲೆ ಕೆಲವು ಬೆಳೆಗಳ ಬಿತ್ತಿಗೆಯನ್ನು ಆರಂಭಿಸುವರು; ಮತ್ತು ಕಾರ್ತಿಕ, ಮಾರ್ಗಶೀರ್ಷ ಮಾಸಗಳಲ್ಲಿ ಬೆಳೆ ತೆಗೆದುಕೊಳ್ಳುವರು. ಆ ಬೆಳೆಗಳು ಮುಂಗಾರಿ ಮಳೆಯಿಂದ ಬರುವ ಮೂಲಕ ಅವುಗಳಿಗೆ ಮುಂಗಾರಿ ಬೆಳೆಗಳೆನ್ನುವರು. ಉದಾ:— ಭತ್ತ, ನವಣೆ, ಸಾವಿ, ರಾಗಿ, ಜೋಳ, ಅಕ್ಕಡಿಕಾಳು ಮೊದಲಾದವುಗಳು. ಕೆಲವು ಬೆಳೆಗಳ ಬಿತ್ತಿಗೆಯನ್ನು ಭಾದ್ರಪದ, ಅಶ್ವೀನಮಾಸಗಳಲ್ಲಿ ಆರಂಭಿಸುವರು; ಮತ್ತು ಅವುಗಳ ಬೆಳೆಯನ್ನು ಮಾಘ, ಫಾಲ್ಗುಣ ಮಾಸಗಳಲ್ಲಿ ತೆಗೆದುಕೊಳ್ಳುವರು. ಆ ಬೆಳೆಗಳು ಹಿಂಗಾರಿ ಮಳೆಯಿಂದ ಬರುವ ಮೂಲಕ ಅವುಗಳಿಗೆ ಹಿಂಗಾರಿ ಬೆಳೆಗಳೆನ್ನುವರು. ಉದಾ:—ಹತ್ತಿ, ಗೋದಿ, ಕಡಲೆ, ಬಿಳಿಜೋಳ ಮೊದಲಾದವುಗಳು.

ನಮ್ಮ ಜಿಲ್ಹೆಯ ಮುಖ್ಯ ಬೆಳೆಯು ಜೋಳ; ಆದರೂ ಪ್ರತಿಯೊಂದು ಪಟ್ಟೆಯಲ್ಲಿಯು ಬೇರೆ ಬೇರೆ ಬೆಳೆಗಳಾದರೂ ಹೆಚ್ಚುಕಡಿಮೆ ಪ್ರಮಾಣದಿಂದ ಮುಖ್ಯವಾಗಿರುತ್ತವೆ. ( ಬೆಳೆಗಳನ್ನು ತೋರಿಸುವ ನಕಾಶೆಯನ್ನು ನೋಡಿರಿ. )




ಪಶ್ಚಿಮಪಟ್ಟಿ:—ಭತ್ತ ಬೆಳೆಯುವದು.

ಮಧ್ಯಪಟ್ಟಿ:— ಕಬ್ಬು, ತಂಬಾಕ, ಮೆಣಸಿನಕಾಯಿ, ಜೋಳ, ಹತ್ತಿ ಮೊದಲಾದವುಗಳು ಬೆಳೆಯುವವು.

**ಪೂರ್ವಪಟ್ಟಿ**:—ಜೋಳ, ಹತ್ತಿ, ಗೋದಿ, ಕಡಲೆ ಮೊದಲಾದವುಗಳು ಬೆಳೆಯುವವು.

**ಭತ್ತ**:—ಇದು ಮಳೆ ಹೆಚ್ಚಾಗುವಲ್ಲಿಯೂ ನೀರಿನ ಪೂರೈಕೆಯಿರುವ ಕೆಂಪು ಭೂಮಿಯಲ್ಲಿಯೂ ಕಸುವಿನಿಂದ ಬೆಳೆಯುವದು. ಈ ಬೆಳೆಯು

ಬೆಳಗಾಂವ, ಖಾನಾಪುರ, ಬೈಲಹೊಂಗಲ ತಾಲೂಕುಗಳ ಪಶ್ಚಿಮಭಾಗದಲ್ಲಿ ವಿಶೇಷವಾಗಿ ಕಂಡುಬರುವದು.

**ಕಬ್ಬು**:—ಇದಕ್ಕೆ ನೀರು ಬಹಳ ಬೇಕು. ಇದು ಚಿಕ್ಕೋಡಿ, ಹುಕ್ಕೇರಿ ತಾಲೂಕುಗಳಲ್ಲಿ ವಿಶೇಷವಾಗಿ ಬೆಳೆಯುವದು. ಬೈಲಹೊಂಗಲ, ಬೆಳಗಾಂವ, ಖಾನಾಪುರ ತಾಲೂಕುಗಳಲ್ಲಿ ಸಾಧಾರಣವಾಗಿ ಬೆಳೆಯುವದು. ಉಳಿದ ಕಡೆಯಲ್ಲಿ ನೀರಿನ ಅನುಕೂಲತೆಯಿದ್ದಲ್ಲಿ ಮಾತ್ರ ಬೆಳೆಯುವದು.

**ತಂಬಾಕ**:—ಇದು ಚಿಕ್ಕೋಡಿ, ಹುಕ್ಕೇರಿ ತಾಲೂಕುಗಳಲ್ಲಿ ವಿಶೇಷ. ಅಥಣಿ, ಗೋಕಾಕ ತಾಲೂಕುಗಳಲ್ಲಿ ಸಾಧಾರಣ; ಉಳಿದ ಕಡೆಯಲ್ಲಿ ತೀರ ಕಡಿಮೆ.

**ಜೋಳ**:—ಇದು ಕೆಂಪು ಹಾಗು ಕರೆ ಭೂಮಿಗಳಲ್ಲಿ ಬೆಳೆಯುವದು. ಇದಕ್ಕೆ ಮಳೆ ಬಹಳ ಬೇಡ. ಈ ಬೆಳೆಯು ಬೆಳಗಾಂವ, ಖಾನಾಪುರ ತಾಲೂಕುಗಳ ಪೂರ್ವಭಾಗದಲ್ಲಿ ಅಲ್ಪಸ್ವಲ್ಪ ಬೆಳೆಯುವದು; ಉಳಿದ ಎಲ್ಲ ತಾಲೂಕುಗಳಲ್ಲಿ ಚನ್ನಾಗಿ ಬೆಳೆಯುವದು.

**ಹತ್ತಿ**:—ಇದು ತಕ್ಕಷ್ಟು ಮಳೆಯಾಗುವ ಉಷ್ಣ ಹವೆಯುಳ್ಳ ಎರೆನೆಲದ ಪ್ರದೇಶದಲ್ಲಿ ಬೆಳೆಯುವದು. ಸವದತ್ತಿ, ಬೈಲಹೊಂಗಲ, ಗೋಕಾಕ, ಅಥಣಿ ತಾಲೂಕುಗಳಲ್ಲಿ ಇದರ ಬೆಳೆಯು ವಿಶೇಷವಾಗಿ ಕಂಡುಬರುವದು. ಉಳಿದ ಕಡೆಯಲ್ಲಿ ಸಾಧಾರಣವಾಗಿ ಬೆಳೆಯುವದು.

**ಗೋದಿ**:—ಇದಕ್ಕೆ ಹೆಚ್ಚು ಚಳಿಯೂ, ಕರೇ ಭೂಮಿಯೂ ಬೇಕು; ನೀರು ಬಹಳ ಬೇಡ. ಇದರ ಬೆಳೆಯು ಬೈಲಹೊಂಗಲ, ಸವದತ್ತಿ, ಗೋಕಾಕ, ಅಥಣಿ ತಾಲೂಕುಗಳಲ್ಲಿ ವಿಶೇಷವಾಗಿ ಕಂಡುಬರುವದು. ಉಳಿದ ಕಡೆಗೆ ತೀರ ಕಡಿಮೆ.

**ಕಡಲೆ**:—ಇದು ಗೋದಿ ಬೆಳೆಯುವಂಥ ಪ್ರದೇಶದಲ್ಲಿ ಬೆಳೆಯುವದಲ್ಲದೆ ಕಸುವುಳ್ಳ ಭತ್ತದ ಭೂಮಿಯಲ್ಲಿ ಸಹ ಬೆಳೆಯುವದು. ಇದಕ್ಕೆ ನೀರು ಬಹಳ ಬೇಡ. ಈ ಬೆಳೆಯು ಹೆಚ್ಚು ಕಡಿಮೆ ಪ್ರಮಾಣದಿಂದ ಎಲ್ಲೆಡೆಗಳಲ್ಲಿಯೂ ಕಂಡುಬರುವದು.

**ಸಜ್ಜೆ:**—ಇದರ ಬೆಳೆಯು ಅಥಣಿ, ಗೋಕಾವಿ, ಚಿಕ್ಕೋಡಿ, ಹುಕ್ಕೇರಿ, ಸವದತ್ತಿ ತಾಲೂಕುಗಳಲ್ಲಿ ಕೆಲಕೆಲವು ಕಡೆಗೆ ಹೆಚ್ಚುಕಡಿಮೆ ಪ್ರಮಾಣದಿಂದ ಕಂಡುಬರುವದು. ಉಳಿದ ಕಡೆಯಲ್ಲಿ ತೀರ ಕಡಿಮೆಯಾಗಿರುವದು.

ಈ ಜಿಲ್ಹೆಯಲ್ಲಿ ನವಣೆ, ಸಾವಿ, ರಾಗಿ ಮೊದಲಾದ ಸಣ್ಣ ಕಾಳುಗಳೂ, ಕುಸುಬೆ, ನೆಲಗಡಲೆ, ಅಗಸಿ, ಎಳ್ಳು ಮೊದಲಾದ ಎಣ್ಣೆಯ ಕಾಳುಗಳೂ ಸಾಧಾರಣವಾಗಿ ಎಲ್ಲ ಕಡೆಯಲ್ಲಿಯೂ ಬೆಳೆಯುತ್ತವೆ. ತೊಗರಿ, ಹೆಸರು ಮೊದಲಾದ ಅಕ್ಕಡಿ ಕಾಳುಗಳಾದರೂ ಅಲ್ಲಲ್ಲಿ ಬೆಳೆಯುತ್ತವೆ. ಹಳ್ಳ-ಹೊಳೆಗಳ ದಂಡೆಗಳಲ್ಲಿರುವ ಸಣ್ಣದೊಡ್ಡ ತೋಟಗಳಲ್ಲಿಯೂ, ಉಳಿದ ಕಡೆಯ ತೋಟಗಳಲ್ಲಿಯೂ ಕಬ್ಬು, ಬಾಳೆ, ಎಲೆಬಳ್ಳಿ, ಗೋವಿನಜೋಳ, ಮೆಣಸಿನಕಾಯಿ, ಕಾಯಿಪಲ್ಲೆ ಮೊದಲಾದವುಗಳು ಹೆಚ್ಚುಕಡಿಮೆ ಪ್ರಮಾಣದಿಂದ ಬೆಳೆಯುತ್ತವೆ.

ಮಳೆಯ ನೀರಿನಿಂದ ಯಾವ ಬೆಳೆಗಳು ಬೆಳೆಯುವವೋ ಅವುಗಳಿಗೆ 'ಜಿರಾಯಿತ ಬೆಳೆ ( ಪೀಕು ) ' ಗಳೆಂದೂ, ಬಾವಿ, ಕೆರೆ, ಕಾಲುವೆ ಮೊದಲಾದವುಗಳ ನೀರು ಉಣ್ಣಿಸುವದರಿಂದ ಬರುವ ಬೆಳೆಗಳಿಗೆ 'ಬಾಗಾಯಿತ ಬೆಳೆ ( ಪೀಕು )' ಗಳೆಂದೂ ಎನ್ನುವರು.

ಒಟ್ಟಿನಲ್ಲಿ ಮಧ್ಯಪಟ್ಟಿಯು ಬೆಳೆಗಳ ವಿಷಯದಲ್ಲಿ ಮೊದಲನೆಯ ತರಗತಿಯದು, ಪೂರ್ವ ಹಾಗು ಪಶ್ಚಿಮ ಪಟ್ಟಿಗಳು ಅನುಕ್ರಮವಾಗಿ ಎರಡನೆಯ ಮೂರನೆಯ ತರಗತಿಯವುಗಳು.

**ಆಹಾರ:**— ಪಶ್ಚಿಮಪಟ್ಟಿಯ ಜನರ ಮುಖ್ಯ ಆಹಾರವು ಅಕ್ಕಿ, ಉಳಿದ ಪಟ್ಟಿಗಳ ಜನರ ಮುಖ್ಯ ಆಹಾರವು ಜೋಳ.

**ಪ್ರಶ್ನೆ:**— ೧ ಮುಂಗಾರಿ, ಹಿಂಗಾರಿ ಬೆಳೆಗಳೆಂದರೇನು ? ಮತ್ತು ಅವು ಯಾವವು ? ೨ ಮಧ್ಯಪಟ್ಟಿಯಲ್ಲಿ ಯಾವ ಯಾವ ಬೆಳೆಗಳು ಬೆಳೆಯುವವು ? ೩ ಪೂರ್ವಪಟ್ಟಿಯಲ್ಲಿ ಭತ್ತವು ಯಾಕೆ ಬೆಳೆಯುವದಿಲ್ಲ ? ೪ ಹತ್ತಿ, ತಂಬಾಕ, ಗೋದಿ ಈ ಬೆಳೆಗಳು ಯಾವ ಯಾವ ತಾಲೂಕುಗಳಲ್ಲಿ ವಿಶೇಷವಾಗಿ ಬೆಳೆಯುವವು ? ೫ ಈ ಜಿಲ್ಹೆಯ ಜನರ ಮುಖ್ಯ ಆಹಾರವು ಯಾವದು ?

---

# ೯ ನೆಯ ಪಾಠ.

## ಪ್ರಾಣಿ ಹಾಗು ಗಿಡಗಂಟಿ.




( ನಕಾಶೆ ನೋಡಿರಿ. ) ಪ್ರಾಣಿಗಳಲ್ಲಿ ಸಾಕುಪಶು ಅಡವಿಪಶು, ಎಂಬ ಎರಡು ಮುಖ್ಯ ಭಾಗಗಳನ್ನು ಮಾಡಬಹುದು.

ಹುಲಿ, ಕರಡಿ, ಕಾಡಹಂದಿ ಮೊದಲಾದವುಗಳು ಅಡವಿಪಶುಗಳು.

ಆಕಳು, ಎತ್ತು, ಎಮ್ಮೆ, ಕುದುರೆ, ಕತ್ತೆ, ಹಂದಿ, ಆಡು, ಕುರಿ, ನಾಯಿ, ಬೆಕ್ಕು ಮೊದಲಾದವುಗಳು ಸಾಕುಪಶುಗಳು.

## ಸಾಕುಪಶುಗಳು.

## ಅಡವಿಪಶುಗಳು.



ಹುಲಿ.



ಕರಡಿ.



**ಕಾಡಹಂದಿ.**

**ಪಶ್ಚಿಮಪಟ್ಟಿ:**— ಈ ಭಾಗದ ಅಡವಿಯಲ್ಲಿ ಪಶುಗಳಿಗೆ ಅಡಗಿಕೊಳ್ಳಲು ಅನುಕೂಲತೆ ಇರುವದರಿಂದ ಹುಲಿ, ಕರಡಿ, ಚಿರ್ಚ್, ಕಾಡಹಂದಿ ಮೊದಲಾದ ಅಡವಿಪಶುಗಳಿರುತ್ತವೆ.

**ಮಧ್ಯಪಟ್ಟಿ:**— ಈ ಭಾಗದಲ್ಲಿ ಜನದಟ್ಟಣೆಯು ವಿಶೇಷವಾಗಿರುವದರಿಂದ ಅಡವಿಪಶುಗಳು ತೀರ ಕಡಿಮೆ. ಚಿಗರೆ, ನರಿ, ಮೊಲ ಮೊದಲಾದ ಪಶುಗಳಿರುವವು. ಕೆಲಕೆಲವು ಕಡೆಗೆ ತೋಳ, ಕಾಡಹಂದಿಗಳಿರುವವು.

**ಪೂರ್ವಪಟ್ಟಿ:**— ಈ ಭಾಗದಲ್ಲಿ ಗುಡ್ಡಗಳೂ, ಗಿಡಗಂಟಿಗಳೂ ಕಡಿಮೆಯಾಗಿರುವದರಿಂದ ಬೈಲು ಪ್ರದೇಶದಲ್ಲಿರುವಂಥ ಚಿಗರೆಗಳು ಹೆಚ್ಚಾಗಿರುತ್ತವೆ. ಕೆಲಕೆಲವು ಕಡೆಗೆ ತೋಳ, ನರಿ, ಮೊಲ ಮೊದಲಾದ ಪಶುಗಳಿರುತ್ತವೆ.

ಈ ಜಿಲ್ಹೆಯಲ್ಲಿ ಎಲ್ಲ ಕಡೆಗೆ ಹೆಚ್ಚು ಕಡಿಮೆ ಪ್ರಮಾಣದಿಂದ ಎತ್ತುಗಳೂ, ಕೋಣಗಳೂ ಇರುವವು. ಕೃಷ್ಣಾತೀರದ ದನಗಳು ಪ್ರಸಿದ್ಧ. ಹೈನದ ಸಲುವಾಗಿ ಎಲ್ಲ ಕಡೆಗೆ ಆಕಳು, ಎಮ್ಮೆ, ಆಡು ಮೊದಲಾದವುಗಳನ್ನು ಸಾಕುವರು. ಕೃಷ್ಣಾನದಿಯ ದಂಡೆಯನ್ನು ಬಿಟ್ಟು ಮಧ್ಯಪಟ್ಟಿಯಲ್ಲಿರುವ ದನಗಳು ಉಳಿದ ಭಾಗಗಳ ದನಗಳಿಗಿಂತ ಹೆಚ್ಚು ಕಸುವುಳ್ಳವುಗಳಿರುತ್ತವೆ. ಯಾಕಂದರೆ ಉತ್ತಮ ಮೇವು ದೊರೆಯುವದು. ಉಳಿದ ಎಲ್ಲ ಸಾಕುಪಶುಗಳು ಹೆಚ್ಚು ಕಡಿಮೆ ಪ್ರಮಾಣದಿಂದ ಎಲ್ಲ ಕಡೆಗೆ ಇರುತ್ತವೆ.





ಕೃಷ್ಣಾತೀರದ ದನಗಳು

**ಜಲಚರಪ್ರಾಣಿ:**—ಕೃಷ್ಣಾ, ಘಟಪ್ರಭಾ, ಮಲಪ್ರಭಾ, ಮೊದಲಾದ ನದಿಗಳಲ್ಲಿ ಮೀನುಗಳಿರುವವು ಕೆಲಕೆಲವು ಕಡೆಗೆ ಮಾತ್ರ ಮೊಸಳೆಗಳಿರುವವು.

**ಮೀನ.** **ಮೊಸಳೆ.**





**ಪಕ್ಷಿ:**—ಗಿಳಿ, ಪಾರಿವಾಳ, ಗರುಡ, ಕೋಳಿ, ಕಾಗೆ, ಗುಬ್ಬಿ, ನೀರಗೋಳಿ, ಕೋಗಿಲೆ, ನವಿಲು, ಹದ್ದು ಮೊದಲಾದ ಪಕ್ಷಿಗಳು ಬಹುತರ ಎಲ್ಲ ಕಡೆಗೆ ಇರುತ್ತವೆ.



**ಪಕ್ಷಿಗಳು.**

**ಗಿಡಗಂಟಿ:**— ಗಿಡಗಳಲ್ಲಿ ೧ ಇಮಾರತಿಗೆ ಉಪಯೋಗ ಬೀಳುವ ಗಿಡಗಳು, ೨ ಹಣ್ಣಿನ ಗಿಡಗಳು, ೩ ಬೇರೆ ಗಿಡಗಳು ಹೀಗೆ ಮೂರು ಪ್ರಕಾರ ಮಾಡಬಹುದು.

೧ ಇಮಾರತಿಗೆ ಉಪಯೋಗ ಬೀಳುವ ಗಿಡಗಳು:—

**ಪಶ್ಚಿಮ ಪಟ್ಟಿ:**— ತೇಗು, ಮತ್ತಿ, ಸಿಸುವು, ಹೊನ್ನಿ ಮೊದಲಾದ ಗಿಡಗಳಿಗೆ ಹೆಚ್ಚು ಮಳೆ ಬೇಕಾಗುವದರಿಂದ ಅವು ಈ ಭಾಗದಲ್ಲಿರುತ್ತವೆ. ಜಾಲಿ, ಬೇವು ಇವುಗಳಿಗೆ ಹೆಚ್ಚಿಗೆ ಮಳೆಯು ತಡೆಯುವದಿಲ್ಲ. ಆದುದರಿಂದ ಈ ಭಾಗ ದಲ್ಲಿ ಅವು ತೀರ ಕಡಿಮೆ.

**ಮಧ್ಯ ಪಟ್ಟಿ:**—ಈ ಭಾಗದಲ್ಲಿ ತೇಗು, ಮತ್ತಿ, ಬಿದುರು, ಜಾಲಿ, ಬೇವು ಮೊದಲಾದ ಗಿಡಗಳಿರುತ್ತವೆ. ಜಾಲಿ ಹಾಗು ಬೇವಿನ ಗಿಡಗಳು ಹೆಚ್ಚು.

**ಪೂರ್ವ ಪಟ್ಟಿ:**— ಈ ಭಾಗದಲ್ಲಿ ಜಾಲಿ ಹಾಗು ಬೇವಿನ ಗಿಡ ಗಳು ಹೆಚ್ಚು.

**೨ ಹಣ್ಣಿನ ಗಿಡಗಳು**:—ಮಾವಿನ ಗಿಡಗಳು ಹೆಚ್ಚು ಕಡಿಮೆ ಪ್ರಮಾ ಣದಿಂದ ಎಲ್ಲ ಕಡೆಗೆ ಇರುತ್ತವೆ. ಈ ಗಿಡಗಳು ಜಿಲ್ಲೆಯ ಪಶ್ಚಿಮಭಾಗದಲ್ಲಿ ಮಾತ್ರ ಹೆಚ್ಚು. ಹಲಸಿನ ಗಿಡಗಳು ಪಶ್ಚಿಮಭಾಗದಲ್ಲಿರುತ್ತವೆ. ಪೂರ್ವಭಾಗ ದಲ್ಲಿ ಒಂದು ಸಹ ಹಲಸಿನ ಗಿಡವಿರುವದಿಲ್ಲ. ಪೇರಲ, ನಿಂಬಿ, ರಾಮಫಲ, ಸೀತಾ ಫಲ, ಬಾಳೆ ಮೊದಲಾದ ಹಣ್ಣಿನ ಗಿಡಗಳಿರುತ್ತವೆ. ಗೋಕಾಕ ತಾಲೂಕಿನ ದಾಳಿಂಬಗಳು ಪ್ರಸಿದ್ಧ.

**೩ ಬೇರೆ ಗಿಡಗಳು:**—ಹುಣಸೆ, ಬೆಳವಳ, ಹುಲಗಲಿ ಮೊದಲಾದ ಗಿಡಗಳೂ, ಗುಡ್ಡಗಳಲ್ಲಿ ಬೆಳೆಯುವ ಹಲವು ಬಗೆಯ ಗಿಡಗಳೂ ಎಷ್ಟೋ ಇರುತ್ತವೆ. ಅಡವಿಗಳಲ್ಲಿ ಅಳಲೀಕಾಯಿ, ಕೇರು, ಅಂಟಾಳಕಾಯಿ, ನೆಲ್ಲೀ ಕಾಯಿ, ತಾರೀಕಾಯಿ, ಸೀಗೆಕಾಯಿ ಮೊದಲಾದ ವ್ಯಾಪಾರದ ಸರಕುಗಳ ಗಿಡಗಳು ದೊರೆಯುತ್ತವೆ. ಪಶ್ಚಿಮಕ್ಕೆ ಗಿಡಗಂಟಿಗಳು ಹೆಚ್ಚು. ಪೂರ್ವಕ್ಕೆ ಹೋದ ಹಾಗೆ ಅವು ಕ್ರಮದಿಂದ ಕಡಿಮೆ ಕಡಿಮೆಯಾಗುತ್ತ ಹೋಗುವವು.

**ಸೂಚನೆ:**— ಜೇನುತುಪ್ಪ ಅಲ್ಲಲ್ಲಿ ದೊರೆಯುತ್ತದೆ. ಅದರಿಂದ ಮೇಣ ಮಾಡುತ್ತಾರೆ.

**ಪ್ರಶ್ನ:—** ೧ ಅಡವಿಪಶುಗಳು ಯಾವ ಭಾಗದಲ್ಲಿರುತ್ತವೆ? ಯಾಕೆ? ೨ ಪ್ರಸಿದ್ಧವಾದ ಎತ್ತು, ಕೋಣಗಳು ಎಲ್ಲಿರುವವು? ೩ ತೇಗು, ಹಲಸು ಪೂರ್ವ ಭಾಗದಲ್ಲಿರುವದಿಲ್ಲ. ಯಾಕೆ? ೪ ಅಡವಿಯಲ್ಲಿ ದೊರೆಯುವ ವ್ಯಾಪಾರದ ಸರಕುಗಳು ಯಾವವು? ೫ ಯಾವ ಭಾಗದಲ್ಲಿ ಗಿಡಗಂಟಿಗಳು ಹೆಚ್ಚು? ಯಾಕೆ?

---

## ೧೦ ನೆಯ ಪಾಠ.

## ಉಗೆಬಂಡೆ, ಮಾರ್ಗ, ವಾಹನ, ಪೋಸ್ಟ ಮತ್ತು ತಾರಆಫೀಸುಗಳು.



**(೧) ರೇಲ್ವೆ:**—ಈ ಜಿಲ್ಹೆಯ ನಟ್ಟನಡುವೆ ಉಗಿಬಂಡಿಯ ಮಾರ್ಗವು ಉತ್ತರದಿಂದ ದಕ್ಷಿಣಕ್ಕೆ ಹೋಗಿರುವದು. ಈ ಮಾರ್ಗದ ಮೇಲೆ ಕಬ್ಬಿಣದ ಹಳಿಗಳಿದ್ದು ಅವುಗಳ ನಡುವಿನ ಅಂತರವು ೩ ೧/೩ ಫೂಟು ಇರುವದು. ಉಗಿಬಂಡಿಗಳು ಹಳಿಗಳ ಮೇಲಿಂದ ಹಾಯ್ದು ಹೋಗುವವು. ಈ ಮಾರ್ಗವು ಪುಣೆಯಿಂದ ಮದ್ರಾಸದವರೆಗೆ ಹೋಗಿರುವದು. ಇದಕ್ಕೆ “**ಮದ್ರಾಸ ಸದರ್ನ ಮರಾಠಾ ರೇಲ್ವೆ**” ಎಂದೆನ್ನುವರು. ಈ ಮಾರ್ಗದ ಮೇಲಿರುವ ಕೆಲವು ಸ್ಟೇಶನಗಳು:—



## ಸ್ಟೇಶನ.

೧ ಶೇಡಬಾಳ ೨ ಉಗಾರಖುರ್ದ ೩ ಕುಡಚಿ ೪ ಚಿಂಚಲಿ ೫ ರಾಯಬಾಗ ೬ ಚಿಕ್ಕೋಡಿರೋಡ ೭ ಬಾಗೇವಾಡಿ ೮ ಹುಕ್ಕೇರಿರೋಡ ೯ ಗೋಕಾಕರೋಡ ೧೦ ಪಾಚ್ಛಾಪುರ ೧೧ ಸುಳಧಾಳ ೧೨ ಸೂಳೇಭಾಂವಿ ೧೩ ಬೆಳಗಾಂವ ೧೪ ದೇಸೂರ ೧೫ ಖಾನಾಪೂರ ೧೬ ಗುಂಜಿ ೧೭ ಲೋಂಡಾ ಮೊದಲಾದವುಗಳು. ಲೋಂಡಾದಿಂದ ಈ ಮಾರ್ಗವು ಎರಡು ಟಿಸಿಲುಗಳಾಗಿ ಒಂದು ಪಶ್ಚಿಮ ಬದಿಗೆ ಗೋವೆಯ ಕಡೆಗೂ, ಮತ್ತೊಂದು ಪೂರ್ವಬದಿಗೆ ಹುಬ್ಬಳ್ಳಿಯ ಕಡೆಗೂ ಹೋಗಿರುತ್ತವೆ. ಹುಬ್ಬಳ್ಳಿಯ ಕಡೆಗೆ ಹೋಗಿರುವ ಮಾರ್ಗದ ಮೇಲೆ ೧ ದೇವರಾಯಿ ೨ ನಾಗರಗಾಳಿ ೩ ತಾವರಗಟ್ಟಿ ಮುಂತಾದ ಸ್ಟೇಶನಗಳಿರುತ್ತವೆ. ಲೋಂಡಾ ಸ್ಟೇಶನದಿಂದ ಈ ಮಾರ್ಗಕ್ಕೆ ಟಿಸಿಲುಗಳು ಒಡೆದಿರುವವು. ಇಂಥ

ಸ್ಟೇಶನಕ್ಕೆ “ ಜಂಕ್ಸನ್ ” ಎಂದೆನ್ನುವರು. ಜಂಕ್ಸನ್ ಹಾಗೂ ದೊಡ್ಡ ದೊಡ್ಡ ಸ್ಟೇಶನುಗಳಲ್ಲಿ ಎಂಜಿನಗಳೂ, ಉಗಿಬಂಡಿಯ ಡಬ್ಬಿಗಳೂ, ಕಲ್ಲಿದ್ದಲಿಯೂ ವಿಶೇಷವಾಗಿರುತ್ತವೆ. ಬೆಳಗಾಂವ ಸ್ಟೇಶನವು ದೊಡ್ಡದಾಗಿರುವದರಿಂದ ಅಲ್ಲಿ ಕಲ್ಲಿದ್ದಲಿ, ಎಂಜಿನ, ಉಗಿಬಂಡಿಯ ಡಬ್ಬಿಗಳಿರುತ್ತವೆ. ಉಗಿಬಂಡಿಯಿಂದ ಪ್ರವಾಸವು ಸ್ವಲ್ಪ ಖರ್ಚಿನಲ್ಲಿ ಬೇಗ ಮುಗಿಯುವದು; ಮತ್ತು ಪದಾರ್ಥಗಳನ್ನು ಬೇರೆ ಕಡೆಗೆ ಕಳುಹಿಸುವ ಹಾಗು ಬೇರೆ ಕಡೆಯಿಂದ ತರಿಸುವ ಕೆಲಸವಾದರೂ ಸ್ವಲ್ಪ ಖರ್ಚಿನಲ್ಲಿ ಬೇಗ ಕೈಗೂಡುವದು.

**೨ ಮಾರ್ಗಗಳು:**—ಇವುಗಳಲ್ಲಿ ಪಕ್ಕಾ ಹಾಗು ಕಚ್ಚಾ ಮಾರ್ಗಗಳೆಂದು ಎರಡು ಪ್ರಕಾರಗಳುಂಟು. ಪಕ್ಕಾ ಮಾರ್ಗಗಳು ಎಲ್ಲ ಕಾಲಗಳಲ್ಲಿ ಉಪಯೋಗವಾಗುವವು. ಕಚ್ಚಾ ಮಾರ್ಗಗಳಿದ್ದಲ್ಲಿ ಮಳೆಗಾಲದೊಳಗೆ ಕೆಸರಾಗುತ್ತದೆ. ಇಲ್ಲಿಯ ಪಕ್ಕಾ ಮಾರ್ಗಗಳ ಕೂಡುವಿಕೆಯ ಸ್ಥಳವು ಬೆಳಗಾಂವಿಯಾಗಿರುವದು. ಈ ಸ್ಥಳದಿಂದ ಬಹುತರ ಎಲ್ಲ ಮಾರ್ಗಗಳು ಜಿಲ್ಹೆಯಲ್ಲೆಲ್ಲ ಪಸರಿಸಿರುತ್ತವೆ ಬೇರೆ ಕಡೆಯಿಂದಾದರೂ, ಎಷ್ಟೋ ಮಾರ್ಗಗಳು ಹೋಗಿರುತ್ತವೆ. ಇಲ್ಲಿಯ ಮಾರ್ಗಗಳಲ್ಲಿ ಐದು ಭಾಗಗಳನ್ನು ಮಾಡಬಹುದು. ೧ ಬೆಳಗಾಂವಿಯಿಂದ ಹೊರಟ ಮಾರ್ಗ. ೨ ಸಂಕೇಶ್ವರದಿಂದ ಹೊರಟ ಮಾರ್ಗ. ೩ ಚಿಕ್ಕೋಡಿಯಿಂದ ಹೊರಟ ಮಾರ್ಗ. ೪ ಅಥಣಿಯಿಂದ ಹೊರಟ ಮಾರ್ಗ. ೫ ಬೇರೆ ಕೆಲವು ಮಾರ್ಗ.

## ಮಾರ್ಗಗಳು.

| ಭಾಗ | ಹೊರಟಸ್ಥಳ | ಹೋಗುವಸ್ಥಳ | ಮಾರ್ಗದ ಮೇಲಿರುವ ಊರು. |
|---|---|---|---|
| ೧ | ಕೊಲ್ಹಾಪುರ | ಬೆಳಗಾಂವ | ಹೆಬ್ಬಾಳ, ಸಂಕೇಶ್ವರ, ಕಣಗಲಿ, ನಿಪ್ಪಾಣಿ. |
| | ವೆಂಗುರ್ಲೆ | ಬೆಳಗಾಂವ | ಉಚಗಾಂವ, ತಾಂಬುಳವಾಡಿ, ದಾಟೆ, ಸಿರಗಾಂವ, ಕಾನೂರ |
| | ವೆಂಗುರ್ಲೆಘಟ್ಟ | ಬೆಳಗಾಂವ | ತುರ್ಕೇವಾಡಿ, ಪಾಟಣೆ. |
| | ಹಳ್ಳಿಯಾಳ | ಬೆಳಗಾಂವ | ಖಾನಾಪುರ, ನಂದಗಡ, ಬೀಡಿ, ಕಕ್ಕೇರಿ, ಲಿಂಗನಮಠ |
| | ಧಾರವಾಡ | ಬೆಳಗಾಂವ | ಬಾಗೇವಾಡಿ, ಮಂಗುಟಖಾನಹುಬ್ಬಳ್ಳಿ, ಕಿತ್ತೂರ. |
| | ಸವದತ್ತಿ | ಬೆಳಗಾಂವ | ಬಾಗೇವಾಡಿ, ಸಾಂಬಗಾಂವ, ಬೈಲಹೊಂಗಲ. ಹೊಸೂರ, ಮಲ್ಲೂರ, ಯಕ್ಕುಂಡಿ, ಗುರ್ಲಹೊಸೂರ |
| | ಕಲಾದಗಿ | ಬೆಳಗಾಂವ | ಕುಡಚಿ, ಮೋದಗಿ, ನೇಸರಗಿ, ಯರಗಟ್ಟಿ. |

| ನಂ | ಹೊರಟಸ್ಥಳ | ಹೋಗುವಸ್ಥಳ | ಮಾರ್ಗದ ಮೇಲಿರುವ ಊರು. |
|---|---|---|---|
| ೨ | ಸಂಕೇಶ್ವರ | ಕಲ್ಲದಗಿ | ಹುಕ್ಕೇರಿ, ಗುಡಸ, ಹಿಂದೀಕುಂಬಟ್ಟಿ, ಕುಲಗೋಡ, ಯಾದವಾಡ |
| | ಸಂಕೇಶ್ವರ | ನರಗುಂದ | ಹುಕ್ಕೇರಿ, ಗುಡಸ, ಹಿಂದೀಕುರಬಟ್ಟಿ, ಗೋಕಾಕ, |
| | ಸಂಕೇಶ್ವರ | ಗಡಯಿಂಗ್ಲಜ | ಯರಗಟ್ಟಿ, ಮುನ್ನೊಳ್ಳಿ, ಹರ್ಲಗಟ್ಟಿ |
| ೩ | ಚಿಕ್ಕೋಡಿ | ನಿಪ್ಪಾಣಿ | ಚಿಂಚಣಿ. |
| | ಚಿಕ್ಕೋಡಿ | ಕುರುಂದವಾಡ | ಎಕಸಂಬಿ, ಅಕಿವಾಟ |
| | ಚಿಕ್ಕೋಡಿ | ಮಿರಜಿ | ಅಂಕಲಿ, ಮಾಂಜರಿ, ಕಾಗವಾಡ |
| | ಚಿಕ್ಕೋಡಿ | ಚಿಕ್ಕೋಡಿರೋಡ | ನಾಗರಮುನ್ನೊಳ್ಳಿ, ಕಬ್ಬೂರ. |
| | ಚಿಕ್ಕೋಡಿ | ಬೆಳಗಾಂವ | ಕರೋಶಿ, ಯಾದಗುಡ್ಡ, ಹುಕ್ಕೇರಿ, ಯಮಕನಮರ್ಡಿ. |
| | ಚಿಕ್ಕೋಡಿ | ಸಂಕೇಶ್ವರ | ಕಮತನೂರ |
| ೪ | ಅಥಣಿ | ಕಾಗವಾಡ | ಮಂಗಸೂಳಿ, ಶೇಡಬಾಳಸ್ಟೇಶನ. |
| | ಅಥಣಿ | ಮಿರಜ | ಬೇಡಗ |
| | ಅಥಣಿ | ತಾಸಗಾಂವ | ಮದಭಾಂವಿ ಬೆಳ್ಳಂಕಿ |
| | ಅಥಣಿ | ಕರ್ಜಗಿ | ಎರಿಹಡಲಗಿ, ಕೋಹಳ್ಳಿ, ಕಕಮರಿ, ಕನಮಡಿ. |
| | ಅಥಣಿ | ವಿಜಾಪುರ | ಐಗಳಿ, ತೆಲಸಂಗ. |
| | ಅಥಣಿ | ಜಮಖಂಡಿ | ನಂದಗಾಂವ, ಹಿರೇಹಟ್ಟಿ |
| | ಅಥಣಿ | ಗೋಕಾಕ | ದರೂರ, ಮಂಗಳಖೋಡ, ನಾಗನೂರ, ಕಲ್ಲೊಳ್ಳಿ. |
| | ಅಥಣಿ | ಕಾಗವಾಡ | ಎನಾಪುರ, ಶೇಡಬಾಳ. |
| ೫ | ಖಾನಾಪುರ | ಕಣಕುಂಬಿ | ಜಾಂಬೋಟಿ. |
| | ಕಣಕುಂಬಿ | ಮಂಗೇಲಿಘಟ್ಟ | ... |
| | ಕಣಕುಂಬಿ | ಸಂಕಲಿಘಟ್ಟ | ಚೋರ್ಲಿ. |
| | ಖಾನಾಪುರ | ತಳೇವಾಡಿ | ... |
| | ಖಾನಾಪುರ | ಜಗಲ್ ಬೇಟ | ಗುಂಜಿ. |
| | ಲಿಂಗನಮಠ | ತಿನ್ನೈಘಾಟ | ಗೋಧೋಳಿ, ನಾಗರಗಾಳಿ. |
| | ಬೀಡಿ | ಬೈಲಹೊಂಗಲ | ಕಿತ್ತೂರ, ಸಂಗೊಳ್ಳಿ, ಅಮಟೂರ. |
| | ಬೈಲಹೊಂಗಲ | ಮುರಗೋಡ | ... |
| | ಸವದತ್ತಿ | ಮುನ್ನೊಳ್ಳಿ | ... |
| | ಯರಗಟ್ಟಿ | ಯಾದವಾಡ | ಸತ್ತಿಗೇರಿ, ಭಾಗೋಜಿಕೊಪ್ಪ, ಹುಲಕುಂದ. |
| | ನಿಪ್ಪಾಣಿ | ಫೋಂಡಾಘಟ್ಟ | ... |
| | ಸೌಂದಲಗಿ | ಕುರುಂದವಾಡ | ಕುನ್ನೂರ, ಕಾರದಗಿ, |



**೩. ವಾಹನಗಳು:**—ಈ ಜಿಲ್ಲೆಯಲ್ಲಿ ಚನ್ನಾಗಿ ಕಟ್ಟಿಸಿದ ಮಾರ್ಗಗಳ ಮೇಲೆ ಮೋಟಾರ, ಕುದುರೆ, ಬಂಡಿ, ಸಾಯಕಲ್, ಟಾಂಗೆ ಮೊದಲಾದ ವಾಹನಗಳ ಓಡಾಟವು ನಡೆಯುತ್ತಿರುವದು. ಉಳಿದ ಸಾಧಾರಣ ಮಾರ್ಗಗಳ ಮೇಲೆ ಬಂಡಿಗಳ ಓಡಾಟವೇ ವಿಶೇಷವಾಗಿರುವದು ಜನರ ಅನುಕೂಲತೆಗಾಗಿ ಅಲ್ಲಲ್ಲಿಗೆ ಎಷ್ಟೋ ಕಾಲುದಾರಿಗಳುಂಟು. ಅವುಗಳ ಮೇಲೆ ಕೆಲವರು ಕಾಲುನಡಿಗೆಯಿಂದಲೂ, ಕೆಲವರು ಕುದುರೆಗಳ ಮೇಲೆ ಸವಾರರಾಗಿಯೂ ಪ್ರವಾಸ ಮಾಡುತ್ತಿರುವರು.

೪ **ಪೋಷ್ಟ**:—ದೊಡ್ಡ ದೊಡ್ಡ ಊರುಗಳಲ್ಲಿ ಪೋಷ್ಟಆಫೀಸುಗಳಿರುತ್ತವೆ. ನಾವು ಅವುಗಳ ಮೂಲಕ ಕಾರ್ಡ, ಪಾಕೀಟುಗಳನ್ನು ಬೇರೆ ಬೇರೆ ಕಡೆಗೆ ಕಳಿಸುತ್ತೇವಲ್ಲದೆ ಹಣವನ್ನಾಗಲಿ, ಸಣ್ಣ ಸಣ್ಣ ಜೀನಸುಗಳನ್ನಾಗಲಿ ಕಳಿಸುತ್ತಿರುವೆವು.

೫ **ತಾರಆಫೀಸು**:—ಒಂದು ಕಡೆಯ ಸುದ್ದಿಯನ್ನು ಬೇರೆ ಕಡೆಗೆ ಆದಷ್ಟು ಬೇಗ ತಿಳಿಸಬೇಕಾದರೆ ತಾರು ಮಾಡಬೇಕಾಗುವದು. ರೇಲ್ವೆ ಸ್ಟೇಶನಗಳಲ್ಲಿಯೂ, ತಾಲೂಕಿನ ಹಾಗು ದೊಡ್ಡ ದೊಡ್ಡ ಗ್ರಾಮುಗಳಲ್ಲಿಯೂ ತಾರು ಮಾಡುವ ಅನುಕೂಲತೆಯುಂಟು. ಒಮ್ಮೊಮ್ಮೆ ಹಣವು ಬೇಗ ಮುಟ್ಟಬೇಕಾಗಿದ್ದರೆ ತಾರ ಮನಿಆರ್ಡರ ಮಾಡಬೇಕಾಗುವದು.

**ಪ್ರಶ್ನೆ**:—೧ ಉಗಿಬಂಡಿಯಲ್ಲಿ ಕುಳಿತು ಶೇಡಬಾಳದಿಂದ ಲೋಂಡಾದ ವರೆಗೆ ಹೋಗಬೇಕಾದರೆ ಮಾರ್ಗದಲ್ಲಿ ಯಾವ ಯಾವ ಸ್ಟೇಶನಗಳು ಹತ್ತುವವು? ೨ ಉಗಿಬಂಡಿಯ ಉಪಯೋಗವೇನು? ೩ ಮೋಟಾರದಲ್ಲಿ ಕುಳಿತು ಕಾಗವಾಡದಿಂದ ಬೆಳಗಾಂವಿಗೆ ಹೋಗಬೇಕಾದರೆ, ಮಾರ್ಗದಲ್ಲಿ ಯಾವ ಯಾವ ಊರುಗಳನ್ನು ನೋಡಬಹುದು? ೪ ಈ ಜಿಲ್ಹೆಯಲ್ಲಿರುವ ಪ್ರವಾಸದ ಸಾಧನಗಳು ಯಾವವು? ೫ ವ್ಯಾಪಾರದ ಬೆಳವಣಿಗೆಯ ಸಾಧನಗಳು ಯಾವವು?

---

## ೧೧ ನೆಯ ಪಾಠ.

### ಉದ್ಯೋಗ, ಕಾರಖಾನೆ, ಖನಿಜ. ( ಭಾಗ-೧. )

ನಮ್ಮ ಜಿಲ್ಹೆಯ ಮುಖ್ಯ ಉದ್ಯೋಗವು ಒಕ್ಕಲತನವಾಗಿರುವದು. ಈ ಉದ್ಯೋಗದಲ್ಲಿ ಸುಮಾರು ೧೦೦ ಕ್ಕೆ ೭೫ ರಿಂದ ೮೦ ರ ವರೆಗೆ ಜನರು ತೊಡಗಿರುವರು. ಅವರಲ್ಲಿ ಲಿಂಗವಂತ, ಮರಾಠಾ, ಜೈನ, ರಡ್ಡಿ ಮೊದಲಾದ ಜಾತಿಯ ಜನರು ಹೆಚ್ಚು ಕಡಿಮೆ ಪ್ರಮಾಣದಿಂದ ಮುಖ್ಯವಾಗಿರುವರು. ಮುಸಲ್ಮಾನರು ಅಲ್ಪಸ್ವಲ್ಪ ಪ್ರಮಾಣದಿಂದ ಕೂಡಿಕೊಳ್ಳುವರು. ಒಕ್ಕಲತನ ಮಾಡುವಂಥ ಜನರಿಗೆ ಬಹಳ ಮಾಡಿ ಸ್ವಂತದ ಭೂಮಿಯಿರುವದು. ಆದರೆ ಯಾರಿಗೆ ತಮ್ಮ ಹೊಟ್ಟೆ ತುಂಬಲು ಸಾಕಷ್ಟು ಭೂಮಿಯು ಇರುವದಿಲ್ಲವೋ ಅಥವಾ ಯಾರಿಗೆ ಸ್ವಂತದ ಭೂಮಿಯು ಇರುವದಿಲ್ಲವೋ ಅಂಥವರು ಬೇರೆಯವರ ಭೂಮಿಗಳನ್ನು ಕೋರಿನಿಂದಾಗಲಿ, ಲಾವಣಿಯಿಂದಾಗಲಿ ಮಾಡುವರು.



ಈ ಜಿಲ್ಹೆಯ ಪೂರ್ವಭಾಗದಲ್ಲಿ ಮಳೆಯು ಅನಿಯಮಿತವಾಗಿರುವದಲ್ಲದೆ ಸಾಕಷ್ಟು ಬೀಳುವದಿಲ್ಲ. ಆದುದರಿಂದ ಮೇಲಿಂದಮೇಲೆ ಬರಬೀಳುವದು. ಇದರಿಂದ ಜನರು ಹೊಟ್ಟೆಹೊರಕೊಳ್ಳುವದರ ಸಲುವಾಗಿ ಬೇರೆ ಬೇರೆ ಪಟ್ಟಣಗಳಿಗೆ ಹೋಗುವರು. ಈ ಒಗೆಯ ಪ್ರಸಂಗಗಳು ಮೇಲಿಂದಮೇಲೆ ಒದಗುವದರಿಂದ ಜನರಲ್ಲಿರುವ ಒಕ್ಕಲತನದ ಪ್ರೀತಿಯು ಕಡಿಮೆಯಾಗತೊಡಗಿರುವದು. ಮಧ್ಯಭಾಗದಲ್ಲಿಯ ಭೂಮಿಯು ಬೆಳೆಯುಳ್ಳದ್ದು; ಮಳೆಯು ಸಾಕಷ್ಟಾಗುತ್ತಿರುವದರಿಂದ ಜನರು ಒಹಳ ಮಾಡಿ ಬೇರೆ ಕಡೆಗೆ ಹೋಗುವದಿಲ್ಲ. ಆದುದರಿಂದ ಈ ಭಾಗದ ಒಕ್ಕಲತನದ ಸ್ಥಿತಿಯು ಚನ್ನಾಗಿರುತ್ತದೆ. ಪಶ್ಚಿಮಭಾಗವು ಗುಡ



ಗಾಡು ಆಗಿರುವದರಿಂದ ಒಕ್ಕಲತನದ ಸ್ಥಿತಿಯು ಲಾಭದಾಯಕವಾಗಿರುವದಿಲ್ಲ.

ಒಕ್ಕಲತನದ ತರುವಾಯ ಮಗ್ಗಗಳ ಮೇಲೆ ಬಟ್ಟೆಗಳನ್ನು ನೇಯುವದು ಮುಖ್ಯ ಉದ್ಯೋಗವಾಗಿರುವದು. ಆದರೆ ಈಗ ಯಂತ್ರಗಳಿಂದಾದ ಸೊಗಸಾದ ಕಡಿಮೆ ಬೆಲೆಯುಳ್ಳ ಬಟ್ಟೆಗಳು ಮಾರಾಟಕ್ಕೆ ಬರುವದರಿಂದ ನೇಯುವ ಉದ್ಯೋಗವು ಕಡಿಮೆಯಾಗಹತ್ತಿರುವದು. ಆದರೂ ಇಲ್ಲಿಯ ಜನರು ಉಪಯೋಗಿಸುವಂಥ ಕೆಲವು ಬಟ್ಟೆಗಳು ಬೇರೆ ಕಡೆಯಿಂದ ಬಾರದ ಮೂಲಕ ನೇಯುವ ಕೆಲಸವು ಇನ್ನೂ ನಡೆದದೆ. ಈ ಉದ್ಯೋಗವನ್ನು ಮುಖ್ಯವಾಗಿ ನೇಕಾರರು ಮಾಡುವರು.



**ಧೋತರ:**—ಗೋಕಾಕ, ಅಥಣಿ, ಬೈಲಹೊಂಗಲ......ಇತ್ಯಾದಿ.

**ಸೀರೆ:**—ಬೆಳಗಾಂವ, ಚಿಕ್ಕೋಡಿ, ದೇಶನೂರ......ಇತ್ಯಾದಿ.

**ಜಾಜಮು ಹಾಗು ಕರಳೆಯ ಹಚ್ಚಡ:**—ಗೋಕಾಕ, ಮುರಗೋಡ, ಮನ್ನೊಳ್ಳಿ......ಇತ್ಯಾದಿ.

**ಜಮುಖಾನೆ:**—ಬೆಳಗಾಂವ, ಬೈಲಹೊಂಗಲ, ಮುಗುಟಖಾನ ಹುಬ್ಬಳ್ಳಿ ಮೊದಲಾವುಗಳಲ್ಲಿ ಸಾಧಾರಣ ಪ್ರತಿಯ ಜಮುಖಾನೆಗಳು ಆಗುತ್ತವೆ. ಬೆಳಗಾವಿ ಜೇಲಿನಲ್ಲಿ ಉತ್ತಮ ಜಮುಖಾನಿ ನೇಯುತ್ತಾರೆ.

**ರೇಶಿಮೆಯ ಸೀರೆ ಹಾಗು ಪೀತಾಂಬರ:**—ಇವು ಬೆಳಗಾಂವ, ಗೋಕಾಕಗಳಲ್ಲಿ ತೀರ ಕಡಿಮೆ ಪ್ರಮಾಣದಲ್ಲಿ ಹುಟ್ಟುತ್ತವೆ.

ಎಲ್ಲ ಕಡೆಗಿರುವ ಕುರುಬರು ಉಣ್ಣೆಯಿಂದ ಕಂಬಳಿಗಳನ್ನು ನೇಯುವರು. ಆದರೆ ಈ ಜಿಲ್ಹೆಯಲ್ಲಿ ಎಲ್ಲಿಯೂ ಮೇಲಾದ ಕಂಬಳಿಗಳು ಹುಟ್ಟುವದಿಲ್ಲ. ಉಣ್ಣೆಯು ಕುರಿಗಳಿಂದ ಹೊರಡುವದು. ಆದರಿಂದ ಅವುಗಳನ್ನು ಸಾಕುವದೊಂದು ಉದ್ಯೋಗವಾಗಿರುತ್ತದೆ. ಹೊಳೆಗಳ ದಂಡೆಯ ಪ್ರದೇಶದಲ್ಲಿ ಮೀನು ಹಿಡಿಯುವ ಉದ್ಯೋಗವು ನಡೆಯುವದು.



ಈ ಜಿಲ್ಹೆಯಲ್ಲಿ ತಾಮ್ರ, ಹಿತ್ತಾಳಿಗಳ ಪಾತ್ರೆಗಳು ಹುಟ್ಟುವವು. ಬೆಳಗಾಂವ, ಚಿಕ್ಕೋಡಿ, ಗೋಕಾಕ ತಾಲೂಕುಗಳಲ್ಲಿ ಪಾತ್ರೆಗಳನ್ನು ಮಾಡುವ ಕೆಲಸವು ಕೆಲಮಟ್ಟಿಗೆ ನಡೆಯುವದು. ಗೋಕಾಕದಲ್ಲಿ ಸಮೆ, ಪಂಚಪಾತ್ರೆ ಮೊದಲಾದ ಎರಕು ಹೊಯ್ದ ಪಾತ್ರೆಗಳು, ಚಿಕ್ಕೋಡಿಯಲ್ಲಿ ಮೂರ್ತಿ ಹಾಗು ಗಿಂಡಿಗಳು ಪ್ರಸಿದ್ಧ. ಎಲ್ಲ ಕಡೆಯಲ್ಲಿರುವ ಕುಂಬಾರರು ಮಣ್ಣಿನ ಪಾತ್ರೆಗಳನ್ನು ಮಾಡುವರು. ಖಾನಾಪುರದ ಗಡಿಗೆಗಳು ಪ್ರಸಿದ್ಧ. ಕಮ್ಮಾರರು ಹೊಲ-ಮನೆಗಳ ಉಪಯೋಗದ ಕಬ್ಬಿಣ ಪದಾರ್ಥಗಳನ್ನು ಮಾಡುವರು. ಕೊಕಟನೂರದ ಅಡಕೊತ್ತು, ಲಗಾಮುಗಳು ಪ್ರಸಿದ್ಧ ಗೋಕಾಕದಲ್ಲಿ ಒಣ್ಣಕೊಟ್ಟ ಕಟ್ಟಿಗೆಯ ಫಲಗಳೂ, ಅಲ್ಪ ಪ್ರಮಾಣದಿಂದ ಉರುಟು ಕಾಗದಗಳೂ ಸಿದ್ಧವಾಗುತ್ತವೆ ಒಕ್ಕಲತನದ ಕಟ್ಟಿಗೆಯ ಸಾಮಾನು ಮಾಡುವ, ಗೋಡೆ ಕಟ್ಟುವ, ಹಗ್ಗ ಹೊಸೆಯುವ, ಚರ್ಮದ ಜೋಡು ಮಾಡುವ ಉದ್ಯೋಗಗಳೂ, ಬೇರೆ ಕೆಲವು ವ್ಯವಸಾಯಗಳೂ ಎಲ್ಲ ಕಡೆಯಲ್ಲಿ ನಡೆಯುತ್ತವೆ.



ಈ ಜಿಲ್ಹೆಯಲ್ಲಿ ಭತ್ತ, ನೆಲಗಡಲೆಗಳು ಉತ್ಪನ್ನವಾಗುವದರಿಂದ ಅವುಗಳನ್ನು ಒಡೆದು ಕಾಳುಮಾಡುವ ಗಿರಣಿಗಳು ಕೆಲಕೆಲವು ಕಡೆಗೆ ಇರುವವು. ಬೀಸುವ ಗಿರಣಿಗಳು ಬಹುತರ ಎಲ್ಲ ದೊಡ್ಡ ದೊಡ್ಡ ಊರುಗಳಲ್ಲಿ ಇರುವವು. ಭತ್ತದ ಪ್ರದೇಶದಲ್ಲಿ ಚುರಮುರಿ ಹುರಿಯುವ ಹಾಗು ಅವಲಕ್ಕಿ ಕುಟ್ಟುವ ಉದ್ಯೋಗಗಳು ನಡೆಯುವವು.



ಧಾನ್ಯ, ಹತ್ತಿ ಮೊದಲಾದ ಸರಕುಗಳನ್ನು ಬೇರೆ ಕಡೆಗೆ ಕಳಿಹಿಸಬೇಕಾಗುತ್ತದೆ; ಮತ್ತು ಹೊರಗಿನಿಂದ ಕಿರಾಣಿ ಜೀನಸು, ಬಟ್ಟೆ ಮೊದಲಾದವುಗಳನ್ನು ತರಿಸಬೇಕಾಗುತ್ತದೆ. ಆದುದರಿಂದ ವ್ಯಾಪಾರ ಮಾಡುವದೊಂದು ಎಷ್ಟೋ ಜನರ ಉದ್ಯೋಗವಾಗಿದೆ. ಮಾರವಾಡಿ, ಗುಜರಾಥಿ, ಬಣಜಿಗ ಈ ಜನರು ಬಹುತರ ವ್ಯಾಪಾರಸ್ಥರಾಗಿರುವರು. ಉಳಿದ ಜನರಲ್ಲಾದರೂ ಕೆಲಕೆಲವರು ವ್ಯಾಪಾರವನ್ನು ಮಾಡುತ್ತಾರೆ.

ಸರಕಾರೀ ಖಾತೆಗಳಲ್ಲಿ ನೌಕರಿ ಮಾಡುವದೊಂದು ಉದ್ಯೋಗವಾಗಿರುವದು. ಇದರಲ್ಲಿ ಬ್ರಾಹ್ಮಣರು ಹೆಚ್ಚು. ಸದ್ಯಕ್ಕೆ ಬೇರೆ ಬೇರೆ ಜಾತಿಯು ಜನರೂ ಸರಕಾರಿ ನೌಕರಿಯೊಳಗೆ ಹೆಚ್ಚು ಪ್ರಮಾಣದಿಂದ ಸೇರತೊಡಗಿರುವರು.

ಈ ಉದ್ಯೋಗಗಳಲ್ಲದೆ ಬೇರೆ ಹಲವು ಬಗೆಯ ಚಿಕ್ಕ-ಪುಟ್ಟ ಉದ್ಯೋಗಗಳನು ಮಾಡಿ ಸಾವಿರಾರು ಜನರು ಹೊಟ್ಟೆ ಹೊರಕೊಳ್ಳುತ್ತಾರೆ.

---

# ೧೨ ನೆಯ ಪಾಠ.

## ಉದ್ಯೋಗ, ಕಾರಖಾನೆ, ಖನಿಜ. ( ಭಾಗ-೨ )



ಗೋಕಾಕ ಗಿರಣಿ.

ಯಾವದೊಂದು ದೊಡ್ಡ ಉದ್ಯೋಗವನ್ನು ಮಾಡುವದರ ಸಲುವಾಗಿ ಯಾವ ಸ್ಥಳದಲ್ಲಿ ಎಷ್ಟೋ ಜನರು ಕೂಡಿಕೊಂಡು ಕೆಲಸ ಮಾಡುತ್ತಿರುವರೋ ಅದಕ್ಕೆ "ಕಾರಖಾನೆ" ಎಂದೆನ್ನುವರು. ಈ ಕಾರಖಾನೆಗಳು ಉಗಿಯ ಶಕ್ತಿಯಿಂದಾಗಲಿ, ವಿದ್ಯುತ್ತಿನ ಶಕ್ತಿಯಿಂದಾಗಲಿ ನಡೆಯುವವು ಈ ಬಗೆಯ ಕಾರಖಾನೆಗಳು ನಮ್ಮ ಜಿಲ್ಹೆಯಲ್ಲಿ ಕೆಲ ಕೆಲವು ಕಡೆಗೆ ಇರುತ್ತವೆ

ಈ ಜಿಲ್ಹೆಯಲ್ಲಿ ಹತ್ತಿಯು ಬೆಳೆಯುತ್ತದೆಂಬುದು ನಿಮಗೆ ಗೊತ್ತುಂಟು. ಅದನ್ನು ಅರೆದು ಅರಳೆ ಮಾಡಿ ಗಂಟುಕಟ್ಟಿ ಬೇರೆ ಕಡೆಗೆ ಕಳುಹಿಸುವರು; ಅಥವಾ ಅರಳೆಯಿಂದ ನೂಲು ತೆಗೆಯುವರು. ಅರಳೆಯು ಹಗುರಾಗಿರುವದರಿಂದ ಅದನ್ನು ಒತ್ತಿ ಗಂಟು ಕಟ್ಟಬೇಕಾಗುವದು. ಈ ಎಲ್ಲ ಕೆಲಸವು ಗಿರಣಿಗಳಲ್ಲಿರುವ ಯಂತ್ರಗಳಿಂದಾಗುವದು. ಅಥಣಿ, ಕಾಗವಾಡ, ಕುಡಚಿ



ಹತ್ತಿ ಅರೆಯುವ ಜೀನು.

ಬೈಲಹೊಂಗಲ, ಸವದತ್ತಿ ಮೊದಲಾದ ಊರುಗಳಲ್ಲಿ ಹತ್ತಿ ಅರೆಯುವ ಗಿರಣಿಗಳಿರುವವು; ಮತ್ತು ಅಥಣಿ, ಕಾಗವಾಡ, ಕುಡಚಿ ಬೈಲಹೊಂಗಲಗಳಲ್ಲಿ ಅರಳೆಯ ಗಂಟು ಕಟ್ಟುವ ಪ್ರೇಸುಗಳುಂಟು. ಘಟಪ್ರಭೆಯ ತಡಸಲಿನ ಹತ್ತರ ನೂಲಿನ ಗಿರಣಿ ಇದ್ದು ಅದು ಆ ತಡಸಲಿನ ನೀರಿನ ಕಸುವಿನಿಂದ ನಡೆಯುವದು.

ಬೆಳಗಾಂವಿಯಲ್ಲಿ ದೀಪದ ಪೆಟ್ಟಿಗೆಗಳನ್ನು ಮಾಡುವ ಕಾರಖಾನೆ, ಘೋಡಗೇರಿಯಲ್ಲಿ ಬಳೆ ಮಾಡುವ ಕಾರಖಾನೆ, ಸಂಕೇಶ್ವರದಲ್ಲಿ ಸಕ್ಕರೆ ಮಾಡುವ ಕಾರಖಾನೆ, ಖಾನಾಪುರದಲ್ಲಿ ಮಂಗಳೂರ ಹಂಚಿನಂಥ ಹಂಚುಗಳನ್ನು ಮಾಡುವ ಕಾರಖಾನೆ ಇರುವವು. ಊದಿನಕಡ್ಡಿ, ಬಿಡಿ ಮೊದಲಾದ ಜೀನಸುಗಳನ್ನು ಮಾಡುವಂಥ ಚಿಕ್ಕ ಪುಟ್ಟ ಕಾರಖಾನೆಗಳು ಬೇರೆ ಬೇರೆ ಕಡೆಗೆ ಇರುತ್ತವೆ

**ಖನಿಜ:—** ಪೂರ್ವದಲ್ಲಿ ಕಬ್ಬಿಣವನ್ನು ತೆಗೆಯುವ ಕುಲಿಮೆಗಳಿದ್ದವು. ಆದರೆ ಈಗ ವಿಲಾಯತಿಯಿಂದ ಬರುವ ಕಬ್ಬಿಣವು ಅಗ್ಗವಾಗಿ ದೊರೆಯುವದರಿಂದ ಅದನ್ನು ತೆಗೆಯುವ ಹೋರೆಯು ನಿಂತುಹೋಗಿದೆ. ಕೃಷ್ಣೆಯ ಪ್ರವಾಹದಲ್ಲಿ ಕೆಲ ಕೆಲವು ಕಡೆಗೆ ಗೋಮೇಧ ರತ್ನದ ಹರಳುಗಳು ದೊರೆಯುವವು. ಗೋಕಾವಿಯ ನೆರೆಯಲ್ಲಿ ಅಭ್ರಕವು ದೊರೆಯುತ್ತದೆ. ರಂಗೋಲಿಯ ಹರಳುಗಳು ಖಾನಾಪುರದ ದಕ್ಷಿಣದಲ್ಲಿ ದೊರೆಯುತ್ತವೆ. ಸುಣ್ಣದ ಹರಳುಗಳು ಯಾದವಾಡದಲ್ಲಿಯೂ, ಖಾನಾಪುರ ತಾಲೂಕಿನಲ್ಲಿಯೂ ದೊರೆಯುವವು. ಉಸುಕಿನ ಕಲ್ಲುಗಳು ಗೋಕಾಕ ಸವದತ್ತಿ ತಾಲೂಕುಗಳಲ್ಲಿ ದೊರೆಯುತ್ತವೆ. ಅವುಗಳಿಂದ ಬೀಸುವಕಲ್ಲು, ಸಾಣೇಕಲ್ಲು, ಗಾಣದ ಗಾಲಿ, ಒರಳು ಮೊದಲಾದವುಗಳನ್ನು

ಮಾಡುವರು. ಬೆಳಗಾಂವಿಯ ಹತ್ತರ ದೊರೆಯುವ ಮಸೆಯುವ ಕಲ್ಲುಗಳು ಪ್ರಸಿದ್ಧ. ಇಮಾರತಿಗೆ ಉಪಯೋಗ ಬೀಳುವಂಥ ಹಲವು ಬಗೆಯ ಬಿರುಸು ಹಾಗು ಮಿದುವು ಜಾತಿಯ ಕರೆಕಲ್ಲುಗಳು ವಿಪುಲವಾಗಿ ದೊರೆಯುತ್ತವೆ. ಶೀಸೇ ಕಲ್ಲುಗಳು ಖಾನಾಪುರ ತಾಲೂಕಿನಲ್ಲಿಯೂ, ಬೆಣಚು ಕೂಡಿದ ಉಸುಕಿನ ಬಿರುಸಾದ ಶಿಲೆಗಳು ಗೋಕಾಕ, ಸವದತ್ತಿ ತಾಲೂಕುಗಳಲ್ಲಿಯೂ ದೊರೆಯುತ್ತವೆ. ಹಲಿಗೆಗಲ್ಲುಗಳು ಕಿತ್ತೂರ ಸಮೀಪದಲ್ಲಿ ದೊರೆಯುವವು. ದೇಶನೂರ ಸಮೀಪದಲ್ಲಿರುವ ಗುಡ್ಡದೊಳಗೆ ತೊಲೆ, ಕಂಬ, ಗಾಲಿ ಮೊದಲಾದವುಗಳನ್ನು ಮಾಡಲಿಕ್ಕೆ ಬರುವಂಥ ಕಲ್ಲುಗಳು ದೊರೆಯುತ್ತವೆ. ಬೆಳಗಾಂವಿಯ ಹತ್ತರ ನೆಲದೊಳಗೆ ಜಂಬೂರಿ ಇಟ್ಟಂಗಿಗಳು ದೊರೆಯುತ್ತವೆ. ಅವುಗಳಿಂದ ಕಟ್ಟಿದ ಗೋಡೆಗಳು ಬೆಳಗಾಂವಿಯಲ್ಲಿ ಇರುವವು.

ಖಾನಾಪುರದ ಮಣ್ಣು, ಗಡಿಗೆ, ಹಂಚು ಮೊದಲಾದವುಗಳನ್ನು ಮಾಡಲಿಕ್ಕೆ ಉತ್ತಮವಾಗಿರುವದು. ಬೆಕವಾಡ, ದೇವಲತ್ತಿಗಳ ಹತ್ತರ ಕುಂಬಾರರ ಕೆಲಸಕ್ಕೆ ಉಪಯೋಗವಾಗುವ ಬಿಂಗವೂ, ಗೋಕಾಕದ ನೆರೆಯಲ್ಲಿ ಹಲವು ಬಗೆಯ ಬಣ್ಣದ ಸೂಸುಮಣ್ಣೂ, ಒಕ್ಕುಂದದ ಹತ್ತರ ಕಾವಿಯೂ, ಬೆಳವಡಿಯ ಹತ್ತರ ಗೋಪೀಚಂದನದ ಮಟ್ಟಿಯೂ, ಸಪ್ತಸಾಗರದ ಹತ್ತರ ಭಸ್ಮವೂ ದೊರೆಯುವವು. ಪೂರ್ವದಲ್ಲಿ ಕೆಲ ಕೆಲವು ಕಡೆಗೆ ಒಂದು ಬಗೆಯ ಮಣ್ಣಿನಿಂದ ಉಪ್ಪು ಮಾಡುತ್ತಿದ್ದರು. ಆದರೆ ಅದರ ಮೇಲೆ ಕರ ಕೂಡಲು ಆ ಕೆಲಸವು ನಿಂತುಹೋಗಿದೆ.

**ಪ್ರಶ್ನ:**— ೧ ನಮ್ಮ ಜಿಲ್ಹೆಯ ಮುಖ್ಯ ಉದ್ಯೋಗವು ಯಾವದು? ೨ ಜಿಲ್ಹೆಯ ಒಕ್ಕಲತನದ ಬಗ್ಗೆ ಗೊತ್ತಾದ ಸಂಗತಿ ಹೇಳಿರಿ. ೩ ಒಕ್ಕಲತನದ ಹೊರ್ತಾಗಿ ಬೇರೆ ಯಾವ ಯಾವ ಉದ್ಯೋಗಗಳು ನಡೆಯುವವು? ೪ ಕರಳೆಯ ಹಚ್ಚಡ, ಸಮೆ, ಗಡಿಗೆ, ಲಗಾಮು ಇವು ಎಲ್ಲಿ ಸಿದ್ಧವಾಗುತ್ತವೆ? ೫ ಹಳ್ಳಿಯ ಹೋರೆಗಳು ಯಾವವು? ೬ ಜಿಲ್ಹೆಯಲ್ಲಿ ಎಂಥ ಕಾರಖಾನೆಗಳಿರುವವು? ಯಾಕೆ? ೭ ಜಿಲ್ಹೆಯಲ್ಲಿ ದೊರೆಯುವ ಖನಿಜಗಳು ಯಾವವು?

---

# ೧೩ ನೆಯ ಪಾಠ.

## ವ್ಯಾಪಾರ.



ಸಂತೆ.

ಒಕ್ಕಲತನ, ನೇಕಾರಿಕೆ ಇವುಗಳಂತೆ ವ್ಯಾಪಾರ ಮಾಡುವದಾದರೂ ಒಂದು ಬಗೆಯ ಉದ್ಯೋಗವಾಗಿರತ್ತದೆಂಬ ಸಂಗತಿಯು ಹಿಂದಿನ ಪಾಠದಲ್ಲಿ ಗೊತ್ತಾಗಿರುವದು. ನಮ್ಮ ಜಿಲ್ಹೆಯಲ್ಲಿ ಯಾವ ಯಾವ ಸರಕುಗಳ ವ್ಯಾಪಾರ ನಡೆಯುತ್ತದೆಂಬದನ್ನು ವಿಚಾರಿಸುವಾ.

ಬೆಳಗಾಂವಿಯು ಜಿಲ್ಹೆಯ ಮುಖ್ಯ ಸ್ಥಳವಾಗಿದ್ದು ಅಲ್ಲಿಂದ ಉಗಿಬಂಡಿಯ ಮಾರ್ಗವು ಹೋಗಿರುತ್ತದೆ; ಮತ್ತು ಲೈನಮಾರ್ಗಗಳಾದರೂ ಬೇರೆ ಬೇರೆ ಕಡೆಗೆ ಹೋಗಿರುತ್ತವೆ. ಆದುದರಿಂದ ಈ ಪಟ್ಟಣವು ವ್ಯಾಪಾರದ ದೆಶೆಯಿಂದ ಹೆಸರಾಗಿರುತ್ತದೆ. ಈ ಪಟ್ಟಣಕ್ಕೆ ಕೊಂಕಣದಿಂದಲೂ, ಮುಂಬಯಿ, ಪುಣೆ, ಸೊಲ್ಹಾಪುರ ಮೊದಲಾದ ಸ್ಥಳಗಳಿಂದಲೂ, ಜಿಲ್ಹೆಯ ಬೇರೆ ಬೇರೆ ಭಾಗಗಳಿಂದಲೂ ಹಲವು ಬಗೆಯ ಸರಕುಗಳು ಬರುತ್ತವೆ. ಆದುದರಿಂದ ಇಲ್ಲಿ ಬಹುತರ ಎಲ್ಲ ಬಗೆಯ ಸರಕುಗಳ ವ್ಯಾಪಾರವು ನಡೆಯುತ್ತದೆ.

ಈ ಜಿಲ್ಹೆಯಲ್ಲಿ ಒಕ್ಕಲತನದ ಉದ್ಯೋಗವು ಹೆಚ್ಚಾಗಿರುವದರಿಂದ ಜೋಳ, ಹತ್ತಿ, ಗೋದಿ, ತಂಬಾಕ, ಬೆಲ್ಲ, ಮೆಣಸಿನಕಾಯಿ ಮೊದಲಾದವುಗಳ



**ದನಗಳ ಸಂತೆ.**

ವ್ಯಾಪಾರವು ವಿಶೇಷವಾಗಿ ನಡೆಯುವದು. ಕೆಲವು ಸರಕುಗಳು ಜಿಲ್ಲೆಯ ಒಂದು ಭಾಗದಿಂದ ಮತ್ತೊಂದು ಭಾಗಕ್ಕೆ ಹೋಗುತ್ತವೆ. ಕೆಲವು ಸರಕುಗಳು ಜಿಲ್ಲೆಯ ಹೊರಗೆ ಹೋಗುತ್ತವೆ. ನಿಪ್ಪಾಣಿ, ಸಂಕೇಶ್ವರ, ಅಥಣಿ, ಬೈಲಹೊಂಗಲ, ನಂದಗಡ, ಗೋಕಾಕ, ಸವದತ್ತಿ, ಮುರಗೋಡ ಮೊದಲಾದ ಸ್ಥಳಗಳು ವ್ಯಾಪಾರದ ದೆಸೆಯಿಂದ ಪ್ರಸಿದ್ಧವಾಗಿರುತ್ತವೆ. ಯಾವ ಸರಕುಗಳು ಬೇರೆ ಕಡೆಗೆ ಹೋಗುವವೋ ಅವುಗಳಿಗೆ ನಿರ್ಯಾತ ಸರಕುಗಳೆನ್ನುವರು. ನಿರ್ಯಾತ ಸರಕುಗಳಲ್ಲಿ ಹತ್ತಿಯು ವಿಶೇಷ ಮಹತ್ವದ್ದಾಗಿರುವದು. ಬೆಲ್ಲ, ತಂಬಾಕ, ಮೆಣಸಿನಕಾಯಿ, ಎಣ್ಣೆಯಕಾಳು, ಗೋದಿ ವೀಳ್ಯದೆಲೆ ಮೊದಲಾದವುಗಳು ಹೆಚ್ಚುಕಡಿಮೆ ಪ್ರಮಾಣದಿಂದ ನಿರ್ಯಾತ ಸರಕುಗಳಲ್ಲಿ ಕೂಡಿಕೊಳ್ಳುವವು. ಹೊರಗೆ ಹೋಗುವ ಸರಕುಗಳು ಬಹುತರವಾಗಿ ಮುಂಬಯಿ. ಕೊಂಕಣ, ಪುಣೆ, ಗೋವೆ ಮೊದಲಾದವುಗಳ ಕಡೆಗೆ ಕಳುಹಿಸಲ್ಪಡುತ್ತವೆ.

ಬೇರೆ ಕಡೆಯಿಂದ ಯಾವ ಸರಕುಗಳು ನಮ್ಮಲ್ಲಿಗೆ ಬರುವವೋ ಅವುಗಳಿಗೆ ಆಯಾತ ಸರಕುಗಳೆನ್ನುವರು. ಅಕ್ಕಿಯು ಪಶ್ಚಿಮಭಾಗದಲ್ಲಿ ಸಿದ್ಧವಾಗುವದು. ಅದು ಕಡಿಮೆಬೀಳುವ ಮೂಲಕ ಹೊರಗಿನಿಂದ ತರಿಸಬೇಕಾಗುತ್ತದೆ. ಬಟ್ಟೆಗಳನ್ನು ನೇಯುವದಕ್ಕೆ ಬೇಕಾಗುವ ನೂಲು, ರೇಶಿಮೆಗಳು ಹೊರಗಿನಿಂದ

ಒರುತ್ತವೆ ಉಪ್ಪು, ತೆಂಗಿನಕಾಯಿ, ಅಡಿಕೆ, ಮಸಾಲೆಯ ಜೀನಸು, ಕಲ್ಲೆಣ್ಣೆ, ದೀಪದಪೆಟ್ಟಿಗೆ, ಸಕ್ಕರೆ, ಆಟಿಗೆಯ ಸಾಮಾನುಗಳು ಬೇರೆ ಬೇರೆ ಕಡೆಯಿಂದ ಬರುತ್ತವೆ. ಈ ಜಿಲ್ಹೆಯಲ್ಲಿ ಬರುವ ಎಲ್ಲ ಸರಕುಗಳು ಬಹುತರವಾಗಿ ಮುಂಬಯಿಯಿಂದ ಬರುವವು. ಕೊಂಕಣ, ಸೊಲ್ಲಾಪುರ. ಅಹಮ್ಮದಾಬಾದ, ಇಳಕಲ್ಲ ಮೊದಲಾದ ಸ್ಥಳಗಳಿಂದಾದರೂ ಬರುವವು. ಹೊರಗಿನಿಂದ ಬರುವ ಸರಕುಗಳು ಉಗಿಬಂಡಿಯಿಂದ ಬರುತ್ತವೆ.

ಕೆಲವು ಸ್ಥಳಗಳಲ್ಲಿ ಪ್ರತಿವಾರಕ್ಕೊಮ್ಮೆ ಸಂತೆ ನೆರೆಯುವದು. ಸಂತೆಗಳಲ್ಲಾದರೂ ಎಷ್ಟೋ ಸರಕುಗಳ ಕೊಡಕೊಳ್ಳುವ ವ್ಯವಹಾರವು ನಡೆಯುವದು. ಈ ಜಿಲ್ಹೆಯಲ್ಲಿ ಸಂತೆ ನೆರೆಯುವ ನೂರಾರು ಸ್ಥಳಗಳಿರುತ್ತವೆ. ಯಾವ ಸ್ಥಳದಲ್ಲಿ ಜಾತ್ರೆ ನೆರೆಯುವದೋ ಆ ಸ್ಥಳದಲ್ಲಾದರೂ ಸರಕುಗಳ ಕೊಡಕೊಳ್ಳುವ ವ್ಯವಹಾರವು ನಡೆಯುತ್ತದೆ. ನಮ್ಮ ಜಿಲ್ಹೆಯಲ್ಲಿ ಜಾತ್ರೆ ನೆರೆಯುವ ಎಷ್ಟೋ ಸ್ಥಳಗಳಿರುತ್ತವೆ.



ಜಾತ್ರೆ.

**ಪ್ರಶ್ನ**:—೧ ಬೆಳಗಾಂವಿಯು ವ್ಯಾಪಾರದ ಬಗ್ಗೆ ಹೆಸರಾಗಿರುವದು. ಯಾಕೆ? ೨ ಆಯಾತ, ನಿರ್ಯಾತ ಸರಕುಗಳೆಂದರೇನು? ೩ ಜಿಲ್ಹೆಯ ಮಹತ್ವವಾದ ನಿರ್ಯಾತ ಸರಕು ಯಾವದು? ಯಾಕೆ? ೪ ಉಪ್ಪು, ಸಕ್ಕರೆ, ಕಲ್ಲೆಣ್ಣೆ ಇವು ಎಂಥ ಸರಕುಗಳು? ೫ ವ್ಯಾಪಾರವು ಯಾವ ಯಾವ ಸ್ಥಳಗಳಲ್ಲಿ ಹೆಚ್ಚಾಗಿ ನಡೆಯುವದು. ? ಯಾಕೆ?

---

## ೧೪ನೆಯ ಪಾಠ.

### ಜನರು.

ಬೆಳಗಾಂವ ಜಿಲ್ಹೆಯಲ್ಲಿ ಪಟ್ಟಣಗಳ ಸಂಖ್ಯೆಯು ತೀರ ಕಡಿಮೆಯಾಗಿದ್ದು ಹಳ್ಳಿಗಳ ಸಂಖ್ಯೆಯು ವಿಶೇಷವಾಗಿರುವದು. ಅವೆಲ್ಲವುಗಳಲ್ಲಿ ಎಷ್ಟೋ ಮನೆಗಳಿದ್ದು ಪ್ರತಿಯೊಂದು ಮನೆಯಲ್ಲಿ ಜನರು ವಾಸಿಸುತ್ತಿರುವರು ಈ ಜನಸಂಖ್ಯೆಯು ಸುಮಾರು ೧೦ ಲಕ್ಷವಾಗಬಹುದು. ಈ ಜಿಲ್ಹೆಯ ಮಧ್ಯಪಟ್ಟಿಯಲ್ಲಿ ಜನದಟ್ಟಣೆಯು ಎಲ್ಲಕ್ಕೂ ಹೆಚ್ಚಾಗಿರುವದು. ಅಂದರೆ ಚೌರಸ ಮೈಲಿಗೆ ಸರಾಸರಿ ೨೫೦-೩೦೦ ಆಗಬಹುದು. ಪೂರ್ವಪಟ್ಟೆಯಲ್ಲಿ ಮಧ್ಯಪಟಿಗಿಂತ ಜನದಟ್ಟಣೆಯು ಕಡಿಮೆಯಾಗಿರುವದು. ಅಂದರೆ ಚೌರಸ ಮೈಲಿಗೆ ಸರಾಸರಿ ೨೦೦-೨೫೦ ಆಗಬಹುದು. ಪಶ್ಚಿಮಪಟ್ಟೆಯಲ್ಲಿ ಮಧ್ಯ ಹಾಗು ಪೂರ್ವಪಟ್ಟೆಗಳಿಗಿಂತ ಜನದಟ್ಟಣೆಯು ಕಡಿಮೆಯಾಗಿರುವದು. ಅಂದರೆ ಚೌರಸ ಮೈಲಿಗೆ ಸರಾಸರಿ ೧೫೦-೨೦೦ ಆಗಬಹುದು. ( ಜನದಟ್ಟಣೆಯ ನಕಾಶೆಯನ್ನು ನೋಡಿರಿ. )

ಈ ಜಿಲ್ಹೆಯ ಜನರಲ್ಲಿ ಹಿಂದೂ ಜನರ ವಸ್ತಿಯು ಹೆಚ್ಚಾಗಿರುತ್ತದೆ. ಇಲ್ಲಿ ಬ್ರಾಹ್ಮಣ, ಲಿಂಗವಂತ, ಜೈನ, ಮರಾಠಾ, ಮುಸಲ್ಮಾನ, ಅಕ್ಕಸಾಲಿಗ, ಕುರುಬ, ಉಪ್ಪಾರ, ಸಿಂಪಿಗ, ಹೊಲೆಯ, ಮಾದಿಗ ಮೊದಲಾದ ಎಷ್ಟೋ ಜಾತಿಯ ಜನರು ಹೆಚ್ಚು ಕಡಿಮೆ ಪ್ರಮಾಣದಿಂದ ವಾಸಮಾಡುತ್ತಿರುವರು ಈ ಎಲ್ಲ ಜಾತಿಯ ಜನರಲ್ಲಿ ಬ್ರಾಹ್ಮಣ, ಲಿಂಗವಂತರ ಸಂಖ್ಯೆಯು ಹೆಚ್ಚಾಗಿರುವದು.




**ಬ್ರಾಹ್ಮಣ:**—ಇವರು ಬುದ್ಧಿವಂತರೂ, ಸ್ವಂತ-ಹಿತದಲ್ಲಿ ಜಾಗರೂಕರೂ ಆಗಿದ್ದು, ದೊಡ್ಡ ದೊಡ್ಡ ಸರಕಾರೀ ನೌಕರಿಗಳನ್ನು ಮಾಡುತ್ತಿರುವರು ಸಾಂಪತ್ತಿಕಸ್ಥಿತಿಯು ಸಮಾಧಾನಕರವಿರುವದು. ಶರೀರಪ್ರಕೃತಿಯಿಂದ ಅಷ್ಟೊಂದು ಗಟ್ಟಿಗರಾಗಿರುವದಿಲ್ಲ. ವಿಶೇಷ ಶ್ರಮದ ಕೆಲಸಗಳಾಗುವದಿಲ್ಲ ಎಲ್ಲ ಜಾತಿಯ ಜನರಿಗಿಂತ ಹೆಚ್ಚಿಗೆ ಸುಖಿಗಳಾಗಿರುವರು. ಕೆಲ ಜನರ

ವ್ಯಾಪಾರ, ಒಕ್ಕಲತನ ಮೊದಲಾದ ಉದ್ಯೋಗಗಳನ್ನು ಮಾಡುವರು. ಬೇರೆ ಕೆಲವರು ಶಾಸ್ತ್ರ, ಪುರಾಣಗಳನ್ನು ಹೇಳಿ ಯಾಚನಾವೃತ್ತಿಯಿಂದ ಜೀವಿಸುವರು.

**ಲಿಂಗವಂತ:**—ಇವರು ಮುಖ್ಯವಾಗಿ ಒಕ್ಕಲತನ ಹಾಗು ವ್ಯಾಪಾರ ಮಾಡುವರು. ಕೆಲವರು ಭಿಕ್ಷೆಯಿಂದ ಜೀವಿಸುತ್ತಲಿರುವರು. ಕೆಲವರು ಇತ್ತಿತ್ತಲಾಗಿ ಸರಕಾರೀ ನೌಕರಿಗಳನ್ನು ಮಾಡತೊಡಗಿರುವರು. ಸಾಂಪತ್ತಿಕಸ್ಥಿತಿಯು ಚೆನ್ನಾಗಿದೆ, ಇತ್ತಿತ್ತಲಾಗಿ ಈ ಸಮಾಜದಲ್ಲಿ ಶಿಕ್ಷಣಪ್ರಸಾರವು ಹೆಚ್ಚಾಗುತ್ತ ನಡೆದಿರುವದು. ಶರೀರಪ್ರಕೃತಿಯಿಂದ ಸುದೃಢರಾಗಿ ಸಾಧಾರಣ ಗಟ್ಟಿಗರಾಗಿರುವರು.

**ಜೈನ:**—ಈ ಜನರ ವಸ್ತಿಯು ಜಿಲ್ಹೆಯ ಉತ್ತರಭಾಗದಲ್ಲಿ ಹೆಚ್ಚಾಗಿರುವದು. ಇವರು ಮುಖ್ಯವಾಗಿ ವ್ಯಾಪಾರ ಹಾಗು ಒಕ್ಕಲತನ ಮಾಡುವರು. ಜನ್ಮಭಾಷೆಯು ಕನ್ನಡ. ಈ ಜನರು ಬುದ್ಧಿವಂತರಾಗಿರುವರು. ಹಾಗು ಮಿತವ್ಯಯವುಳ್ಳವರಾಗಿರುವರು.

**ಮರಾಠಾ:**—ಇವರು ಒಕ್ಕಲತನ ಹಾಗು ಕೂಲಿ-ಕುಂಬಳಿ ಮಾಡುವರು. ಸಾಂಪತ್ತಿಕಸ್ಥಿತಿಯು ಸಾಧಾರಣವಾಗಿರುವದು. ಶಿಕ್ಷಣಪ್ರಸಾರವು ಕಡಿಮೆ. ಶರೀರಪ್ರಕೃತಿಯಿಂದ ಸುದೃಢರೂ, ಗಟ್ಟಿಗರೂ ಆಗಿದ್ದು, ಒಣಡೌಲು ತೋರಿಸುವ ಅಭ್ಯಾಸವು ಹೆಚ್ಚಾಗಿರುವದು. ಸೈನ್ಯದಲ್ಲಿ ನೌಕರಿಯನ್ನು ಮಾಡುತ್ತಿರುವರು.

**ಮುಸಲ್ಮಾನ:**—ಇವರು ಒಕ್ಕಲತನ ಹಾಗು ವ್ಯಾಪಾರ ಮಾಡುವರಲ್ಲದೆ ನೇಕಾರಿಕೆ ಮೊದಲಾದ ಹಲವು ಬಗೆಯ ಉದ್ಯೋಗಗಳನ್ನು ಮಾಡುವರು. ಶರೀರಪ್ರಕೃತಿಯು ಚನ್ನಾಗಿದ್ದು, ಸೈನ್ಯದಲ್ಲಿ ಇವರ ಸಂಖ್ಯೆಯು ವಿಶೇಷವಾಗಿರುವದು. ಸಾಂಪತ್ತಿಕಸ್ಥಿತಿಯು ಸಾಧಾರಣ. ಈ ಜನರು ವಿಶೇಷ ಧರ್ಮಾಭಿಮಾನಿಗಳಾಗಿರುವರು.

ಸಿಂಪಿಗರೂ, ಬಣಜಿಗರೂ ವ್ಯಾಪಾರಿಗಳಾಗಿರುವರು. ಇವರ ಸ್ಥಿತಿಯು ನೆಟ್ಟಗಿರುವದು. ಮಾರವಾಡಿಗಳೂ, ಗುಜ್ಜರೂ ವ್ಯಾಪಾರದ ಸಲುವಾಗಿ ಇತ್ತಕಡೆಗೆ ಬಂದು ಮನೆ-ಮಾರು ಮಾಡಿಕೊಂಡು ನಿಂತಿರುವರು. ಇವರಲ್ಲಿ ಬಡವರ

ಸಂಖ್ಯೆಯು ಕಡಿಮೆ. ಇವರು ಮನೆಯಲ್ಲಿ ಅನುಕ್ರಮವಾಗಿ ಮಾರವಾಡಿ, ಗುಜರಾಥಿ ಭಾಷೆಗಳನ್ನಾಡುವರಲ್ಲದೆ, ತಮ್ಮ ತಮ್ಮ ಭಾಷೆಗಳಲ್ಲಿಯೇ ಲೆಕ್ಕ-ಪತ್ರಗಳನ್ನು ಇಡುವರು. ನೇಕಾರರು ಅಲ್ಲಲ್ಲಿಗೆ ಹೆಚ್ಚು ಕಡಿಮೆ ಪ್ರಮಾಣದಿಂದಿದ್ದು ಮುಖ್ಯವಾಗಿ ನೇಯುವ ಕೆಲಸ ಮಾಡುವರು. ಹೊಲದ ಹುಟ್ಟುವಳಿಯು ಕಡಿಮೆ. ಹೊಲೆಯರೂ, ಮಾದಿಗರೂ ಅತಿಶಯ ಅಶಿಕ್ಷಿತರಾಗಿರುವದರಿಂದ ಕೂಲಿ-ಕುಂಬಳಿ ಮಾಡಿದ ಹೊರ್ತು ಹೊಟ್ಟೆಗೆ ಸಹ ದೊರೆಯುವದು ದುರ್ಲಭವಾಗಿರುತ್ತದೆ. ಈ ಜನರು ಬಲು ಗಟ್ಟಿಗರಾಗಿರುವರು. ಹೊಲೆಯರು ಸರಕಾರಿ ಕೆಲಸಗಳನ್ನು ಮಾಡುವರು. ಮಾದಿಗರು ಹಗ್ಗ ಹೊಸೆಯುವ ಉದ್ಯೋಗಮಾಡುವರು.

ಕ್ರಿಶ್ಚನ್ನರು ಜಿಲ್ಲೆಯ ದಕ್ಷಿಣಭಾಗದಲ್ಲಿ ಹೆಚ್ಚಾಗಿರುವರು. ಇವರಿಗೆ ಶಿಕ್ಷಣ ಕೊಡುವದರ ಸಲುವಾಗಿ "ಅಮೇರಿಕನ್ ಮಿಶನರಿ" ಶಾಲೆಗಳಿರುತ್ತವೆ.

**ಪ್ರಶ್ನೆ:**— ೧ ಈ ಜಿಲ್ಲೆಯ ಯಾವ ಭಾಗದಲ್ಲಿ ಜನದಟ್ಟಣೆಯು ಹೆಚ್ಚಾಗಿರುವದು? ೨ ಇಲ್ಲಿ ಯಾವ ಯಾವ ಜಾತಿಯ ಜನರಿರುವರು? ೩ ಬ್ರಾಹ್ಮಣ, ಲಿಂಗವಂತರ ಬಗ್ಗೆ ಗೊತ್ತಾದ ಸಂಗತಿ ಹೇಳಿರಿ.

---

## ೧೫ ನೆಯ ಪಾಠ.

### ಜನರ ಸ್ಥಿತಿ ಹಾಗೂ ಆಹಾರ.

ಹವಾಮಾನ, ಮಳೆ-ಬೆಳೆ, ತಿಂಬುಂಬುವ ಪದಾರ್ಥ ಮೊದಲಾದವುಗಳ ಪರಿಣಾಮವು ಮನುಷ್ಯರ ಮೇಲಾಗುವದರಿಂದ ಬೇರೆ ಬೇರೆ ಸ್ಥಳಗಳಲ್ಲಿರುವ ಜನರ ಶರೀರ ಹಾಗು ಸ್ವಭಾವಗಳಲ್ಲಿ ಹೆಚ್ಚು ಕಡಿಮೆ ಇರುವದು. ಸಾಧಾರಣ ಉಷ್ಣ ಹವೆ ಹಾಗು ಕಸುವುಳ್ಳ ಆಹಾರ ಇವು ಶರೀರಕ್ಕೆ ಹೆಚ್ಚು ಪೋಷಕವಾಗಿರುತ್ತವೆ. ತೇವುಳ್ಳ ಉಷ್ಣ ಹವೆ ಹಾಗು ಸಾಧಾರಣ ಕಸುವುಳ್ಳ ಆಹಾರ ಇವು ಶರೀರಕ್ಕೆ ಅಷ್ಟೊಂದು ಪೋಷಕವಾಗಿರುವದಿಲ್ಲ. ಶರೀರದ ಘಟನೆಯ ಮೇಲಾದರೂ ಸ್ವಭಾವವು ಹೆಚ್ಚಾಗಿ ಅವಲಂಬಿಸಿರುವದು. ನಮ್ಮ ಜಿಲೆಯ ಪ್ರತಿಯೊಂದು ಭಾಗವು ಯಾವ ತರದ್ದಿರುವದು? ಮತ್ತು ಅವುಗಳಿಂದ ಮನುಷ್ಯರ ಮೇಲಾದ ಪರಿಣಾಮವೇನು? ಎಂಬದನ್ನು ವಿಚಾರಿಸುವಾ.

**ಪಶ್ಚಿಮ ಪಟ್ಟಿ:**— ಈ ಭಾಗವು ಗುಡ್ಡಗಾಡು ಆಗಿದ್ದು ಗಿಡಗಂಟೆಗಳು ವಿಶೇಷವಾಗಿರುವದರಿಂದ ಮಳೆಯು ಹೆಚ್ಚಾಗುತ್ತದೆ. ಹೆಚ್ಚು ಮಳೆಯಾಗುವದರಿಂದ ಗಿಡಗಳ ಎಲೆಗಳು ಕೊಳೆಯುವವು. ಭೂಮಿಯು ತೇವು ಹಿಡಿಯುವದು. ಆದುದರಿಂದ ಮಳೆಗಾಲದ ಹವೆಯು ರೋಗಕರವಾಗಿರುವದು. ಆ ಕಾಲಕ್ಕೆ ಚಳಿಜ್ವರ ಮೊದಲಾದ ರೋಗಗಳು ಹಬ್ಬುವವು. ಚಳಿಗಾಲದಲ್ಲಿ ಹವೆಯು ಚನ್ನಾಗಿರುವದು. ಬೇಸಿಗೆಯಲ್ಲಿ ಹವೆಯು ತಂಪಾಗಿರುವದರಿಂದ ಕೆಲಜನ ಶ್ರೀಮಂತರು ಬೆಳಗಾಂವಿಯಲ್ಲಿ ಬಂದು ನಿಲ್ಲುವರು.

ಈ ಭಾಗದ ಜನರ ಮುಖ್ಯ ಆಹಾರವು ಅಕ್ಕಿಯಾಗಿರುವದು. ಈ ಆಹಾರವು ಕಡಿಮೆ ಕಸುವುಳ್ಳದ್ದಿರುವದರಿಂದ ಜನರ ಶರೀರವು ಅಷ್ಟೊಂದು ಗಡುತರವಾಗಿರುವದಿಲ್ಲ. ಹುಟ್ಟುವಳಿಯು ಕಡಿಮೆಯಾಗಿರುವದರಿಂದ ಹೊಟ್ಟೆಯು ಸಲುವಾಗಿ ಹೆಚ್ಚಿಗೆ ದುಡಿಯಬೇಕಾಗುವದು. ಜನರು ಕಷ್ಟಸಹಿಸುವಂಥವರಿದ್ದು ಗಟ್ಟಿಗರಾಗಿರುವರು. ಧನದ ಮೂಲಕ ಉಂಟಾಗುವ ಮದವು ವಿಶೇಷ ಕಂಡುಬರುವದಿಲ್ಲ. ಬಡತನದ ಮೂಲಕ ಇರುವಿಕೆಯು ಸಾದಾತರದ್ದಾಗಿರುವದು.

**ಮಧ್ಯ ಪಟ್ಟಿ:**— ಈ ಭಾಗದ ಹವೆಯು ಚನ್ನಾಗಿರುವದು. ಆದರೂ ಮಳೆಗಾಲಕ್ಕಿಂತ ಉಳಿದ ದಿವಸಗಳ ಹವೆಯು ಉತ್ತಮವಾಗಿರುವದು. ಒಮ್ಮೊಮ್ಮೆ ಜ್ವರದ ಪಿಡಗು ಉಂಟಾಗುವದು. ಗಿಡಗಂಟೆಗಳು ಸಾಧಾರಣವಾಗಿದ್ದು ಭೂಮಿಯು ಬೆಳೆಯುಳ್ಳದ್ದಿರುವದು. ಜನರ ಮುಖ್ಯ ಆಹಾರವು ಜೋಳ. ಈ ಆಹಾರವು ಕಸುವುಳ್ಳದ್ದಿರುವದರಿಂದ ಜನರು ಶರೀರದಿಂದ ಸುದೃಢರೂ, ಆನಂದವೃತ್ತಿಯುಳ್ಳವರೂ ಆಗಿರುವರು. ಹೊಟ್ಟೆಯ ಸಲುವಾಗಿ ಹೆಚ್ಚಿಗೆ ದುಡಿಯಬೇಕಾಗುವದಿಲ್ಲ. ಕಾರಣ ಪಶ್ಚಿಮಪಟ್ಟಿಯ ಜನರಷ್ಟು ಕಷ್ಟಸಹಿಸುವಂಥವರೂ, ಗಟ್ಟಿಗರೂ ಆಗಿರುವದಿಲ್ಲ. ಸಾಂಪತ್ತಿಕ ಸ್ಥಿತಿಯು ಸಮಾಧಾನಕರವಾಗಿರುವದು. ಹೊಟ್ಟೆಯ ಸಲುವಾಗಿ ೫-೬ ತಿಂಗಳು ದುಡಿಯಬೇಕಾಗುತ್ತದೆ. ಉಳಿದ ವೇಳೆಯಲ್ಲಿ ಹತ್ತರ ಹಣವಿರುವ ಮೂಲಕ ಸುಮ್ಮನೆ ಕೂಡ್ರದೆ ಬಡಿದಾಟ, ನ್ಯಾಯ, ಐಷ-ಆರಾಮುಗಳಲ್ಲಿ ಕಾಲಕಳೆಯುವರು. ಚಿಕ್ಕೋಡಿ, ಬೈಲಹೊಂಗಲ ತಾಲೂಕುಗಳಲ್ಲಿ ಈ ಬಗೆಯ ಪರಿಣಾ

ಮತ್ತು ಹೆಚ್ಚಾಗಿ ಕಂಡುಬರುವದು. ಈ ಭಾಗದ ಜನರು ಸುಮ್ಮನಿರದೆ ಯಾವ ದೊಂದು ಬಗೆಯ ಗೊಂದಲವನ್ನೆಬ್ಬಿಸುತ್ತಿರುವರು; ಮತ್ತು ಸಾರ್ವಜನಿಕ ಕೆಲ ಸಗಳನ್ನು ಹೆಚ್ಚಾಗಿ ಕೈಕೊಳ್ಳುವರು. ಇಲ್ಲಿಯ ಕೆಲಕೆಲವು ಭಾಗದ ಜನರ ಸ್ಥಿತಿಯು ಪಶ್ಚಿಮ ಹಾಗು ಪೂರ್ವಪಟ್ಟಿಗಳಲ್ಲಿರುವ ಜನರ ಸ್ಥಿತಿಯನ್ನು ಹೋಲುವದು.

**ಪೂರ್ವಪಟ್ಟಿ**:—ಈ ಭಾಗದಲ್ಲಿ ಗುಡ್ಡಗಳೂ, ಗಿಡಗಂಟಿಗಳೂ, ಕಡಿ ಮೆಯಾಗಿರುವದರಿಂದ ಹವೆಯು ಉಷ್ಣವಾಗಿರುತ್ತದೆ ಮಳೆಯು ಕಡಿಮೆಯಾ ಗುವದರಿಂದ ಆದರಲ್ಲಿ ತೇವಾದರೂ ಕಡಿಮೆ ಈ ಬಗೆಯ ಹವೆಯು ಆರೋ ಗ್ಯಕ್ಕೆ ಉತ್ತಮವಾಗಿರುವದು. ಆದರೆ ಬೇಸಿಗೆಯಲ್ಲಿ ಮಾತ್ರ ಬಿಸಿಲಿನ ತಾಪ ಸಹಿಸಬೇಕಾಗುವದು. ಜೋಳವು ಜನರ ಮುಖ್ಯ ಆಹಾರವು. ಮಳೆಯು ಅನಿಯ ಮಿತವಾಗಿರುವದರಿಂದ ಮೇಲಿಂದ ಮೇಲೆ ಬರಬೀಳುವ ಸಂಭವವುಂಟು. ಆದು ದರಿಂದ ಕೆಲಭಾಗದ ಜನರು ಇಡೀ ವರ್ಷ ಒಂದಿಲ್ಲೊಂದು ಬಗೆಯ ಉದ್ಯೋಗ ಮಾಡಬೇಕಾಗುವದು. ಸಾಂಪತ್ತಿಕ ಸ್ಥಿತಿಯು ಅಷ್ಟೊಂದು ಸಮಾಧಾನಕರ ವಿರದ ಮೂಲಕ ಜನರಿಗೆ ಸೊಗಸೆನಿಸುವದಿಲ್ಲ. ಆದುದರಿಂದ ಅವರ ಶರೀರ ಪ್ರಕೃತಿಯು ಮಧ್ಯಪಟ್ಟಿಯ ಜನರಷ್ಟು ಸುದೃಢವಾಗಿರುವದಿಲ್ಲ. ಆದರೆ ಪಶ್ಚಿಮ ಪಟ್ಟಿಯ ಜನರಿಗಿಂತ ಎಷ್ಟೋ ಪಾಲು ಚನ್ನಾಗಿರುತ್ತದೆ. ಈ ಭಾಗದ ಜನರು ಸಾಧಾರಣ ಗಟ್ಟಿಗರೂ, ಕಷ್ಟಸಹಿಸುವಂಥವರೂ ಆಗಿರುವರು. ಧನದ ಮದವು ಹೆಚ್ಚಾಗಿ ಕಂಡುಬರುವದಿಲ್ಲ. ಆದರೆ ಒಂಟಿಗರಾಗಿ ಹೆಮ್ಮೆಯಿಂದ ವರ್ತಿ ಸುವ ಗುಣವು ಮಾತ್ರ ಅಲ್ಪ ಸ್ವಲ್ಪ ಕಂಡುಬರುವದು. ಹೊಟ್ಟೆಯ ಉದ್ಯೋ ಗದಲ್ಲಿ ತೊಡಗಿರುವದರಿಂದ ಸಾರ್ವಜನಿಕ ಕೆಲಸಗಳು ವಿಶೇಷವಾಗುವದಿಲ್ಲ

**ಪ್ರಶ್ನ**:— ೧ ಬೇರೆ ಬೇರೆ ಭಾಗಗಳಲ್ಲಿಯ ಜನರ ಶರೀರ ಪ್ರಕೃತಿ ಹಾಗು ಸ್ವಭಾವಗಳಲ್ಲಿ ಹೆಚ್ಚು ಕಡಿಮೆ ಕಂಡುಬರುವದು ಯಾಕೆ? ೨ ಯಾವ ಭಾಗದ ಹವೆಯು ಆರೋಗ್ಯಕ್ಕೆ ಹಿತಕರವಾದದ್ದು? ಯಾಕೆ? ೩ ಮಧ್ಯಪಟ್ಟಿಯ ಜನರ ಸ್ಥಿತಿ ಹೇಳಿರಿ.

---

# ೧೬ ನೆಯ ಪಾಠ.

## ಭಾಷೆ ಹಾಗು ಶಿಕ್ಷಣ.

ಈ ಜಿಲ್ಲೆಯಲ್ಲಿ ಕನ್ನಡ ಹಾಗು ಮರಾಠಿ ಭಾಷೆಗಳು ಮುಖ್ಯವಾಗಿರುವವು. ಉರ್ದು, ಗುಜರಾಥಿ, ಮಾರವಾಡಿ ಮೊದಲಾದ ಭಾಷೆಗಳಾದರೂ ಅಲ್ಪ ಸ್ವಲ್ಪ ನಡೆಯುವವು. ಮುಸಲ್ಮಾನರು ಉರ್ದು ಭಾಷೆಯನ್ನಾಡುವರು. ಪಶ್ಚಿಮಭಾಗದ ಭಾಷೆಯಲ್ಲಿ ಕನ್ನಡ-ಮರಾಠಿ ಶಬ್ದಗಳು ಮಿಶ್ರವಾಗಿರುವವು. ಇಲ್ಲಿಯ ಎಷ್ಟೋ ಜನರಿಗೆ ಕನ್ನಡ ಹಾಗು ಮರಾಠಿ ಇವೆರಡೂ ಭಾಷೆಗಳು ಬರುತ್ತವೆ. ವ್ಯವಹಾರಗಳು ಕನ್ನಡದಲ್ಲಿಯೂ, ಮರಾಠಿಯಲ್ಲಿಯೂ ನಡೆಯುವವು. ಕೆಲವು ಸುಶಿಕ್ಷಿತರಿಗೆ ಇಂಗ್ಲಿಷ ಭಾಷೆಯು ಬರುವದು. ಸರಕಾರದ ಕಾಗದಪತ್ರಗಳಲ್ಲಿ ಇಂಗ್ಲಿಷ ಬರಹವು ಹೆಚ್ಚಾಗಿರುವದು.

ಇಂಗ್ಲಿಷ ಸರಕಾರದ ರಾಜ್ಯವು ಆರಂಭವಾದಂದಿನಿಂದ ಯಾವತ್ತು ಜನರಿಗೆ ಶಿಕ್ಷಣ ದೊರೆಯಬೇಕೆಂದು ಅಲ್ಲಲ್ಲಿಗೆ ಶಾಲೆಗಳು ಸ್ಥಾಪಿಸಲ್ಪಟ್ಟಿರುತ್ತವೆ. ಈ ಜಿಲ್ಹೆಯಲ್ಲಿ ಕನ್ನಡ ಶಾಲೆಗಳ ಸಂಖ್ಯೆಯು ಹೆಚ್ಚಾಗಿರುವದು. ಮರಾಠಿ ಶಾಲೆಗಳಾದರೂ ಇರುವವು. ತಾಲೂಕಿನ ಸ್ಥಳಗಳಲ್ಲಿಯೂ ಬೇರೆ ಕೆಲವು ಕಡೆಗೂ ಇಂಗ್ಲಿಷ ಶಿಕ್ಷಣದ ಶಾಲೆಗಳೂ, ಮುಸಲ್ಮಾನರ ವಸ್ತಿಯು ಹೆಚ್ಚಾಗಿರುವ ಸ್ಥಳಗಳಲ್ಲಿ ಉರ್ದು ಶಿಕ್ಷಣದ ಶಾಲೆಗಳೂ ಇರುತ್ತವೆ. ಸಾವಿರಾರು ಪ್ರಾಥಮಿಕ ಶಾಲೆಗಳಿದ್ದು ಅವುಗಳಲ್ಲಿ ಹುಡುಗರೂ, ಹುಡಿಗೆಯರೂ ಶಿಕ್ಷಣ ಹೊಂದುತ್ತಿರುವರು. ಜನರಿಗೆ ಶಿಕ್ಷಣದ ಮಹತ್ವವು ತಿಳಿದಂದಿನಿಂದ ಹಳ್ಳಿ-ಪಳ್ಳಿಗಳಲ್ಲಿ ಸಹ ಶಾಲೆಗಳುಂಟಾಗಿರುತ್ತವೆ. ಶಿಕ್ಷಣಖಾತೆಯು ಜಿಲ್ಹಾ ಲೋಕಲ್ ಬೋರ್ಡಿನವರ ವಶಕ್ಕೆ ಬಂದಂದಿನಿಂದ ಶೇತಕಿಶಿಕ್ಷಣ ಕೊಡುವದರಸಲುವಾಗಿ ಹುದಲಿ, ಪಾರ್ಶ್ವವಾಡ, ನಂದಗಡ, ಕಿತ್ತೂರ, ಮುಗಟಖಾನಹುಬ್ಬಳ್ಳಿ, ನೇಸರಗಿ, ಮನ್ನೊಳ್ಳಿ, ಚಚಡಿ, ಕೊಣ್ಣೂರ, ಕುಲಗೋಡ, ಕೊಂಗನೋಳಿ, ಬೇಡಕಿಹಾಳ, ಕಾಗವಾಡ ಈ ಶಾಲೆಗಳಿಗೆ ಶೇತಕೀಕ್ಲಾಸುಗಳು ಜೋಡಿಸಲ್ಪಟ್ಟಿರುವವು. ಮತ್ತು ಇಂಗ್ಲಿಷ ಶಿಕ್ಷಣವು ಹೆಚ್ಚಾಗಿ ಬೆಳೆಯಬೇಕೆಂದು ಬೆಳಗಾಂವ ಉರ್ದು ಖಾಸಾಪೂರ, ಸಂಪಗಾಂವ, ಕೌಜಲಗಿ, ಹುಕ್ಕೇರಿ, ಭೋಜ ಎಕಸಂಬಿ, ಶೇಡಬಾಳ, ಯರಗಟ್ಟಿ ಈ ಶಾಲೆಗಳಿಗೆ ಇಂಗ್ಲಿಷಕ್ಲಾಸುಗಳು

ಜೋಡಿಸಲ್ಪಟ್ಟಿರುವವು. ಈ ಮೊದಲೇ ಕುಡಚಿ ಉರ್ದು ಶಾಲೆಗೆ ಇಂಗ್ಲಿಷ ಕ್ಲಾಸು ಜೋಡಿಸಲ್ಪಟ್ಟಿರುವದು.

ಬ್ರಾಹ್ಮಣವರ್ಗದಲ್ಲಿ ಸುಶಿಕ್ಷಿತರ ಸಂಖ್ಯೆಯು ಹೆಚ್ಚಾಗಿರುವದು. ಜೈನ, ಲಿಂಗವಂತರಲ್ಲಾದರೂ ಎಷ್ಟೋ ಜನರು ಕಲಿತಿರುವರು. ಉಳಿದ ಜನರಲ್ಲಿ ಸುಶಿಕ್ಷಿತರ ಪ್ರಮಾಣವು ಕಡಿಮೆಯಾಗಿರುವದು. ಆದರೆ ಇತ್ತಿತ್ತಲಾಗಿ ಎಲ್ಲ ಜಾತಿಯ ಜನರಲ್ಲಿ ಸುಶಿಕ್ಷಿತರ ಪ್ರಮಾಣವು ಭರದಿಂದ ಬೆಳೆಯಲಾರಂಭಿಸಿರುವದು.

**ಪ್ರಶ್ನ:**— ೧ ಜಿಲ್ಲೆಯಲ್ಲಿ ನಡೆಯುವ ಮುಖ್ಯ ಭಾಷೆಗಳು ಯಾವವು? ೨ ಶಾಲೆಗಳೊಳಗೆ ಯಾವ ಯಾವ ಭಾಷೆಗಳಲ್ಲಿ ಶಿಕ್ಷಣವು ಕೊಡಲ್ಪಡುವದು? ೩ ಶೇತಕೀ ಕ್ಲಾಸುಗಳು ಜೋಡಿಸಲ್ಪಟ್ಟಿರುವಂಥ ಶಾಲೆಗಳ ಹೆಸರು ಹೇಳಿರಿ.

---

## ೧೭ ನೆಯ ಪಾಠ.



ಪಂಚಮ ಜಾರ್ಜ ಬಾದಶಹರು.

## ರಾಜ್ಯದಾಡಳಿತೆ.

### ( ೧ ) ಜಿಲ್ಲೆಯ ಭಾಗ ( ೨ ) ಅಧಿಕಾರಿ ( ೩ ) ಕೆಲಸ.

ಈ ಜಿಲ್ಹೆಯಲ್ಲಿ ರಾಜ್ಯದಾಡಳಿತೆಯ ಅನುಕೂಲತೆಗಾಗಿ ಎಂಟು ತಾಲೂಕುಗಳೂ, ಒಂದು ಮಹಾಲೂ ಮಾಡಲ್ಪಟ್ಟಿರುತ್ತವೆ. ಜಿಲ್ಹೆಯ ಮುಖ್ಯಾಧಿಕಾರಿಯು ಕಲೆಕ್ಟರನು. ತಾಲೂಕಿನ ಅಧಿಕಾರಿಯು ಮಾಮಲೇದಾರನು. ಮಹಾಲಿನ ಅಧಿಕಾರಿಯು ಮಹಾಲಕರಿಯು. ಈ ಪ್ರಕಾರ ಜಿಲ್ಹೆಯ ಅಧಿಕಾರಿಗಳಿರುವರು.

ಭೂಮಿಯ ತೆರಿಗೆಯನ್ನು ವಸೂಲ ಮಾಡುವದು, ಅಪರಾಧಿಗಳನ್ನು ಹಿಡಿಯುವದು, ಜನರಿಗೆ ನ್ಯಾಯವನ್ನು ದಯಪಾಲಿಸುವದು ಇವೇ ಮೊದಲಾದ ಕೆಲಸಗಳನ್ನು ಸರಕಾರದವರು ಬೇರೆ ಬೇರೆಯಾಗಿ ಗೊತ್ತುಮಾಡಿರುವರು. ಈ ಎಲ್ಲ ಕೆಲಸಗಳನ್ನು ಮಾಡುವದರಸಲುವಾಗಿ ಸರಕಾರದವರು ಯಾವ ವ್ಯವಸೆಯನ್ನು ಮಾಡಿರುವರೋ ಅದಕ್ಕೆ "ಖಾತೆ" ಎಂದೆನ್ನುವರು. ಬೇರೆ ಬೇರೆ ಖಾತೆ, ಅವುಗಳ ಮೇಲಿನ ಅಧಿಕಾರಿ ಈ ವಿಷಯವನ್ನು ವಿಚಾರಿಸುವಾ.



ಕಚೇರಿ.

**( ೧ ) ಮುಲ್ಕೀಖಾತೆ:—** ಇದು ವಸೂಲಿಯ ಖಾತೆಯು. ಇದರ ಮುಖ್ಯಾಧಿಕಾರಿಯು ಕಲೆಕ್ಟರನು. ಇವನು "೧ ಭೂಮಿಯ ತೆರಿಗೆಯನ್ನು

ವಸೂಲ ಮಾಡುವದು, ೨ ಕೊಲೆ-ಸುಲಿಗೆ ಮೊದಲಾದವುಗಳಂಥ ಅಪರಾಧಗಳ ವಿಚಾರಮಾಡುವದು, ೩ ಜಿಲ್ಹೆಯಲ್ಲಿ ಆರೋಗ್ಯವನ್ನೂ, ಶಾಂತತೆಯನ್ನೂ ಕಾಯು ವದು." ಇವೇ ಮೊದಲಾದ ಕೆಲಸಗಳನ್ನು ಮಾಡಬೇಕಾಗುವದು. ಕಲೆಕ್ಟ ರನ ಕೆಲಸಗಳಲ್ಲಿ ಸಹಾಯ ಮಾಡುವದರ ಸಲುವಾಗಿ ನಮ್ಮ ಜಿಲ್ಹೆಯಲ್ಲಿ ಮೂವರು ಅಧಿಕಾರಿಗಳಿರುವರು. ರಾಜ್ಯದಾಡಳಿತೆಯ ಅನುಕೂಲತೆಗಾಗಿ ಉತ್ತರ ಹಾಗು ದಕ್ಷಿಣ ಎಂಬೆರಡು ಭಾಗಗಳು ಮಾಡಲ್ಪಟ್ಟಿದ್ದು ಒಂದೊಂದು ಭಾಗದ ಮೇಲೆ ಒಬ್ಬೊಬ್ಬ ಅಧಿಕಾರಿಯು ನೇಮಿಸಲ್ಪಟ್ಟಿರುವನು. ಆ ಅಧಿಕಾ ರಿಗೆ ಡಿಸ್ಟ್ರಿಕ್ಟ ಡೆಪ್ಯುಟಿ ಕಲೆಕ್ಟರನೆಂದೆನ್ನುವರು. ಡಿಸ್ಟ್ರಿಕ್ಟ ಡೆಪ್ಯುಟಿ ಕಲೆಕ್ಟರ ರಲ್ಲದೆ ಕಲೆಕ್ಟರನಿಗೆ ಸಹಾಯ ಮಾಡುವಂಥ ಮೂರನೆಯವನೊಬ್ಬ ಅಧಿಕಾರಿಯು ಇರುವನು. ಅವನಿಗೆ ಹುಜೂರ ಡೆಪ್ಯುಟಿ ಕಲೆಕ್ಟರನೆಂದೆನ್ನುವರು. ಅವನ ವಶದಲ್ಲಿ ಜಿಲ್ಹೆಯ ಬೊಕ್ಕಸವಿರುವದು. ಡಿಟ್ರಿಕ್ಟ ಡೆಪ್ಯುಟಿ ಕಲೆಕ್ಟರನು "ಆಯ್. ಸಿ. ಎಸ್." ಪರೀಕ್ಷೆಯನ್ನು ಪಾಸಾಗಿದ್ದರೆ ಅವನಿಗೆ ಅಸಿಸ್ಟಂಟ ಕಲೆಕ್ಟರನೆಂದೆ ನ್ನುವರು.

(೨) **ನೋಂದಣಿ (ರಜಿಸ್ಟರ) ಖಾತೆ:**— ಈ ಖಾತೆಯಾದರೂ ಕಲೆಕ್ಟರನ ವಶದಲ್ಲಿರುತ್ತದೆ. ಒಬ್ಬರಿಗೊಬ್ಬರು ಸಾಲಕೊಡುವ ವ್ಯವಹಾರ ವಾಗಲಿ, ಭೂಮಿಯ ಕೊಡಕೊಳ್ಳುವ ವ್ಯವಹಾರವಾಗಲಿ ನಡೆಯುವವು. ಇಂಥ ವ್ಯವಹಾರಗಳನ್ನು ಸ್ಟಾಂಪುಗಳ ಮೇಲೆ ಬರೆದು ಅವುಗಳ ನಕಲು ಸರಕಾರಿ ಪುಸ್ತಕದಲ್ಲಿ ತೆಗೆದುಕೊಳ್ಳುವರು. ಬಳಿಕ ಆ ಸ್ಟಾಂಪುಗಳ ಮೇಲೆ ಸರಕಾರಿ ಮುದ್ರೆಯನ್ನು ಮುದ್ರಿಸಿ ಅವುಗಳನ್ನು ಆಯಾ ಕಾಗದಗಳ ಒಡೆಯರಿಗೆ ಕೊಡುವರು. ಹೀಗೆ ಮಾಡುವದರಿಂದ ಆ ಕಾಗದಗಳಲ್ಲಿ ಯಾರೊಬ್ಬರಿಗೂ ಹೆಚ್ಚು ಕಡಿಮೆ ಮಾಡಲಿಕ್ಕೆ ಬರುವದಿಲ್ಲ. ಆ ಕಾಗದಗಳು ಯಾರ ಎದುರಿಗೆ ತಯಾರಿಸಲ್ಪಡುವವೋ ಆ ಅಧಿಕಾರಿಗೆ "ಸಬ್ ರಜಿಸ್ಟ್ರಾರ" ಎಂದೆನ್ನುವರು ಈ ಅಧಿಕಾರಿಗಳು ಪ್ರತಿಯೊಂದು ತಾಲೂಕಿನ ಸ್ಥಳದಲ್ಲಿಯೂ, ತಾಲೂಕ ದೊಡ್ಡದಿದ್ದರೆ ಬೇರೆ ಕಡೆಗೆ ಸಹ ಇರುವರು. ಇವರ ಮೇಲ್ವಿಚಾರಣೆಗಾಗಿ "ಇನಸ್ಪೆಕ್ಟರ ಆಫ್ ರಜಿಸ್ಟ್ರೇಶನ್" ಎಂಬ ಅಧಿಕಾರಿಯಿದ್ದು ಅವನು ಕಲೆಕ್ಟ ರನ ಕೈಕೆಳಗಿನವನಾಗಿರುವನು.



ನ್ಯಾಯ ಕಚೇರಿ.

( ೩ ) **ನ್ಯಾಯಖಾತೆ:**—ಈ ಖಾತೆಯ ಮುಖ್ಯಾಧಿಕಾರಿಗೆ " ಡಿಸ್ಟ್ರಿಕ್ಟಜಜ್ಜ " ಎಂದೆನ್ನುವರು ಇವನು ಭೂಮಿಯ ಹಾಗು ಕೊಡಕೊಳ್ಳುವ ದೊಡ್ಡ ದೊಡ್ಡ ವ್ಯವಹಾರಗಳ ಸಂಬಂಧದ ನ್ಯಾಯನಿರ್ಣಯ ಮಾಡುವನು. ಅಲ್ಲದೆ ಕೊಲೆ-ಸುಲಿಗೆಗಳಂಥ ಫೌಜದಾರಿ ಅಪರಾಧಗಳ ವಿಚಾರಣೆ ಮಾಡಬೇಕಾಗುವದು. ಇಂಥ ಫೌಜದಾರಿ ವ್ಯಾಜ್ಯಗಳು ಕಲೆಕ್ಟರನಿಂದ ಡಿಸ್ಟ್ರಿಕ್ಟ ಜಜನ ಕಡೆಗೆ ಬರುವವು. ಅಪರಾಧಿಗೆ ಗಲ್ಲಿಗೇರಿಸುವ ಅಥವಾ ಗಡಿದಾಟಿಸುವ ಅಧಿಕಾರವು ಸೇಶನ್ಸ ಜಜ್ಜನಿಗೆ ಇರುವದು. ಈ ಅಧಿಕಾರಿಯ ಕೈಕೆಳಗೆ " ಸಬ್‌ಜಜ್ಜ " ಎಂಬ ಹೆಸರಿನ ಅಧಿಕಾರಿಗಳಿರುವರು. ಒಂದು ಇಲ್ಲವೆ ಎರಡು ತಾಲೂಕುಗಳಿಗೊಬ್ಬನಂತೆ " ಸಬ್ ಜಜ್ಜ " ಎಂಬ ಹೆಸರಿನ ಅಧಿಕಾರಿಯಿರುವನು. ಇವನ ಕಡೆಗೆ ಭೂಮಿಯ ಮತ್ತು ಹುಟ್ಟುವಳಿಯ ಸಣ್ಣ ಸಣ್ಣ ವ್ಯಾಜ್ಯಗಳ ನಿರ್ಣಯ ಮಾಡುವ ಕೆಲಸವಿರುವದು. ಸಬ್‌ಜಜ್ಜನು ಕೊಟ್ಟ ನಿರ್ಣಯದ ವಿರುದ್ಧ ಡಿಸ್ಟ್ರಿಕ ಜಜ್ಜನ ಕಡೆಗೆ ತಕರಾರು ಮಾಡಲಿಕ್ಕೆ ಬರುವದು.

ಪ್ರಶ್ನ:—೧ ಖಾತೆ ಎಂದರೇನು? ಮತ್ತು ಅವು ಯಾವವು? ೨ ಕಲೆಕ್ಟರನು ಮಾಡತಕ್ಕ ಕೆಲಸಗಳು ಯಾವವು? ೩ ಹುಜೂರ ಡೆಪ್ಯುಟಿ ಕಲೆಕ್ಟರನ ಬಗ್ಗೆ ಗೊತ್ತಿದ್ದ ಸಂಗತಿ ಹೇಳಿರಿ. (೪) ನೋಂದಣಿ ಹೇಗೆ ಮಾಡುವರು? (೫) ಸೇಶನ್ಸ ಜಜ್ಜನ ಅಧಿಕಾರ ಹೇಳಿರಿ.

---

## ೧೮ ನೆಯ ಪಾಠ.

### ೨ನೆಯ ಭಾಗ.



ಪೋಲೀಸರು.

(೪) **ಪೋಲೀಸಖಾತೆ:**—ಈ ಖಾತೆಯ ಮುಖ್ಯಾಧಿಕಾರಿಗೆ "ಪೋಲೀಸ ಸುಪರಿಂಟೆಂಡೆಂಟ" ಎಂದೆನ್ನುವರು. ಜಿಲ್ಹೆಯಲ್ಲಿ ಶಾಂತತೆಯನ್ನು ಕಾಯುವದು, ಕೊಲೆ-ಸುಲಿಗೆ, ಬಡಿದಾಟ ಮೊದಲಾದ ಅಪರಾಧಗಳನ್ನು ಮಾಡುವಂಥ ಜನರನ್ನು ಹಿಡಿದು ಕಲೆಕ್ಟರನ ವಶಕ್ಕೆ ಒಪ್ಪಿಸುವದು ಇವು

ಈ ಖಾತೆಯ ಕೆಲಸಗಳಾಗಿರುತ್ತವೆ. ಪೋಲೀಸ ಸುಪರಿಂಟೆಂಡೆಂಟನ ಸಹಾಯಕ್ಕೆ ಇಬ್ಬರು ಅಧಿಕಾರಿಗಳಿದ್ದು, ಅವರಲ್ಲಿಯು ಒಬ್ಬನಿಗೆ ಅಸಿಸ್ಟಂಟ ಪೋಲೀಸ ಸುಪರಿಂಟೆಂಡೆಂಟನೆಂದೂ, ಮತ್ತೊಬ್ಬನಿಗೆ ಡೆಪ್ಯುಟ ಪೋಲೀಸ ಸುಪರಿಂಟೆಂಡೆಂಟನೆಂದೂ ಕರೆಯುವರು. ಈ ಅಧಿಕಾರಿಗಳ ಕೈಕೆಳಗೆ ಪೋಲೀಸ ಇನಸ್ಪೆಕ್ಟರರೆಂಬ ಬೇರೆ ಅಧಿಕಾರಿಗಳಿದ್ದು, ಅವರ ವಶದಲ್ಲಿ ೨-೩ ತಾಲೂಕುಗಳಿರುವವು. ಇನಸ್ಪೆಕ್ಟರರ ಕೈಕೆಳಗೆ " ಸಬ್ ಇನಸ್ಪೆಕ್ಟರ " ನೆಂಬ ಅಧಿಕಾರಿಯು ಇರುವನು. ಅವನಿಗೆ " ಫೌಜದಾರ " ನೆಂದೆನ್ನುವರು. ಪ್ರತಿಯೊಂದು ತಾಲೂಕಿನಲ್ಲಿ ಅಪರಾಧಗಳೊದಗುವ ಪ್ರಮಾಣದ ಮೇಲಿಂದ ಫೌಜದಾರರಿರುವಂಥ ಸ್ಥಳಗಳು ಹೆಚ್ಚು ಕಡಿಮೆಯಾಗಿರುತ್ತವೆ.

( ೫ ) **ಶಾಲಾ ಖಾತೆ:**—ಈ ಖಾತೆಯು ಲೋಕಲ್‌ಬೋರ್ಡಿನವರ ವಶದಲ್ಲಿರುವದು. ಇದರ ಮುಖ್ಯಾಧಿಕಾರಿಗೆ " ಸ್ಕೂಲಬೋರ್ಡ ಚೇಅರಮನ್ " ಎಂದೆನ್ನುವರು. ಈ ಅಧಿಕಾರಿಯ ಕೈಕೆಳಗೆ " ಅಡ್‌ಮಿನಿಸ್ಟ್ರೇಟಿವ್ಹ ಆಫೀಸರ " ಎಂಬ ಹೆಸರಿನ ಅಧಿಕಾರಿಯು ಇರುವನು. ಶಾಲೆಗಳ ಪರೀಕ್ಷೆ ತೆಗೆದುಕೊಳ್ಳುವದು, ಶಾಲೆಯ ಕೆಲಸಗಳ ಮೇಲ್ವಿಚಾರಣೆ ಮಾಡುವದು, ಹೊಸ ಶಾಲೆಗಳನ್ನು ಹೊರಡಿಸುವದು ಇವೇ ಮೊದಲಾದವುಗಳು ಈ ಖಾತೆಯ ಕೆಲಸಗಳಾಗಿರುತ್ತವೆ. ಅಡ್‌ಮಿನಿಸ್ಟ್ರೇಟಿವ್ಹ ಆಫೀಸರರ ಸಹಾಯಕ್ಕೆ " ಸುಪರವಾಯಝರ " ಎಂಬ ಹೆಸರಿನ ಅಧಿಕಾರಿಗಳಿರುತ್ತಾರೆ. ಈ ಬಗೆಯ ಅಧಿಕಾರಿಗಳು ನಮ್ಮ ಜಿಲ್ಹೆಯಲ್ಲಿ ಎಂಟು ಜನರಿರುವರಲ್ಲದೆ " ಸೀನಿಯರ ಅಸಿಸ್ಟಂಟ ಡೆಪ್ಯುಟಿ ಎಜ್ಯುಕೇಶನಲ್ ಇನಸ್ಪೆಕ್ಟರ " ಎಂಬ ಹೆಸರಿನ ಒಬ್ಬ ಸರಕಾರಿ ಅಧಿಕಾರಿಯು ಇರುತ್ತಾನೆ. ಸ್ಕೂಲಬೋರ್ಡಿನ ಆಡಳಿತೆಯನ್ನು ನೋಡುವದು ಈತನ ಕೆಲಸವಾಗಿರುತ್ತದೆ.

( ೬ ) **ಇಂಜಿನಿಅರಿಂಗ ಖಾತೆ:**—ಹೊಸಮಾರ್ಗ, ಸರಕಾರಿ ಕಟ್ಟಡ, ಪೂಲು ಮೊದಲಾದವುಗಳನ್ನು ಕಟ್ಟಿಸುವದು, ಹಳೆಮಾರ್ಗ, ಕಟ್ಟಡ, ಪೂಲು ಇವುಗಳ ತಿದ್ದುಪಡೆಮಾಡುವದು ಇವು ಈ ಖಾತೆಯ ಕೆಲಸಗಳಾಗಿರುತ್ತವೆ. ಇದರ ಮುಖ್ಯಾಧಿಕಾರಿಗೆ " ಎಕ್ಝಿಕ್ಯೂಟಿವ್ಹ ಇಂಜನಿಯರ " ಎಂದೆನ್ನುವರು. ಇವನ ಕೈಕೆಳಗೆ ಅಸಿಸ್ಟಂಟ ಇಂಜಿನಿಅರ ಹಾಗು ಸಬ್‌ಇಂಜಿನಿಅರ ಎಂಬ



ಎಂಜಿನ ರೂಳು.

ಹೆಸರಿನ ಅಧಿಕಾರಿಗಳಿರುತ್ತಾರೆ; ಮತ್ತು ಅವರ ಕೈಕೆಳಗೆ ಸುಪರವಾಯಝರ, ಓವ್ಹರಸಿಅರ ಮೊದಲಾದ ಜನರಿರುತ್ತಾರೆ. ಒಕ್ಕಲತನದ ಉಪಯೋಗದ ಸಲುವಾಗಿ ಕೆರೆ, ಕಾಲುವೆ ಕಟ್ಟಿಸುವದು, ಅವುಗಳ ನೀರು ಒಕ್ಕಲಿಗರಿಗೆ ಕೊಡುವದು, ಒಕ್ಕಲಿಗರಿಂದ ನೀರಿನ ಪಟ್ಟಿ ವಸೂಲಮಾಡುವದು ಈ ಬಗೆಯ ಕೆಲಸ ಮಾಡುವದರ ಸಲುವಾಗಿ "ಇರಿಗೇಶನಖಾತೆ" ಇರುತ್ತದೆ. ಇದು ಇಂಜಿನಿಅರಿಂಗಖಾತೆಯ ಭಾಗವಾಗಿರುವದು.

( ೭ ) **ಪೋಷ್ಟ ಖಾತೆ:**—ಈ ಖಾತೆಯ ಮುಖ್ಯಾಧಿಕಾರಿಯು "ಸುಪರಿಂಟೆಂಡೆಂಟ" ಎಂಬವನಾಗಿರುವನು. ಈ ಖಾತೆಯ ಮೂಲಕ ಪತ್ರ, ಮನಿ ಆರ್ಡರ, ವ್ಹಿ. ಪಿ. ಮೊದಲಾದವುಗಳು ಒಂದು ಕಡೆಯಿಂದ ಬರುವವಲ್ಲದೆ ಮತ್ತೊಂದು ಕಡೆಗೆ ಹೋಗುವವು. 'ತಾರ' ಕಳುಹಿಸುವ ಕೆಲಸವಾದರೂ ಈ ಖಾತೆಯಿಂದಾಗುವದು. ಇದರ ಸಲುವಾಗಿ ಅಲ್ಲಲ್ಲಿಗೆ ತಾರಆಫೀಸುಗಳಿರುತ್ತವೆ. ಬೆಳಗಾಂವಿಯಲ್ಲಿಯ ಮುಖ್ಯ ಪೋಸ್ಟಆಫೀಸಿನ ಅಧಿಕಾರಿಗೆ "ಹೆಡ್ ಪೋಸ್ಟ ಮಾಸ್ತರ" ಎಂದೆನ್ನುವರು. ಇವನ ವಶದಲ್ಲಿ ಜಿಲ್ಹೆಯಲ್ಲಿಯ ಎಲ್ಲ ಪೋಸ್ಟ ಆಫೀಸುಗಳಿರುತ್ತವೆ. ಸುಪರಿಂಟೆಂಡೆಂಟನು ಈ ಖಾತೆಯ ಮೇಲ್ವಿಚಾರಣೆ ಮಾಡುವನು. ಇವನ ಸಹಾಯಕ್ಕೆ ಇಬ್ಬರು ಇನಸ್ಪೆಕ್ಟರರಿರುತ್ತಾರೆ.



ಪೋಸ್ಟ ಆಫೀಸು.

( ಲ ) **ವೈದ್ಯಖಾತೆ:**—ರೋಗಿಗಳಿಗೆ ಔಷಧೋಪಚಾರ ಮಾಡುವದರ ಸಲುವಾಗಿ ಬೆಳಗಾಂವಿಯೊಳಗೆ ಒಂದು ದೊಡ್ಡ ದವಾಖಾನೆ ಇರುತ್ತದೆ. ಅದರ ಮುಖ್ಯಾಧಿಕಾರಿಗೆ "ಸಿವ್ಹಿಲ್‌ಸರ್ಜನ" ಎಂದೆನ್ನುವರು. ಇವನು ಜಿಲ್ಹೆಯೊಳಗಿನ ದೊಡ್ಡ ದೊಡ್ಡ ಊರುಗಳಲ್ಲಿರುವ ದವಾಖಾನೆಗಳ ಮೇಲ್ವಿಚಾರಣೆ ಮಾಡುವನು. ಕೆಲವು ಕಡೆಗೆ ದನಗಳ ದವಾಖಾನೆಗಳು ಇರುತ್ತವೆ.



ದವಾಖಾನೆ.



ದನಗಳ ದವಾಖಾನೆ.

( ೯ ) ಆರೋಗ್ಯಖಾತೆ:— ಜನರ ಆರೋಗ್ಯದ ಸಲುವಾಗಿ ಚಿಕ್ಕ ಮಕ್ಕಳಿಗೆ ಮೈಲಿ ತೆಗೆಯುವದು, ಕುಡಿಯುವ ನೀರಿನ ಸ್ವಚ್ಛತೆಯ ಸಲುವಾಗಿ ವ್ಯವಸ್ಥೆಯನ್ನಿರಿಸುವದು, ಪ್ಲೇಗ, ಮಾರೀಬೇನೆ ಮೊದಲಾದ ರೋಗಗಳ ಕಾಲಕ್ಕೆ 'ಇನಾಕ್ಯುಲೇಶನ್' ಮಾಡಿಸುವದು; ಮತ್ತು ಔಷಧಗಳನ್ನು ಪೂರೈಸುವದು ಇವೇ ಮೊದಲಾದವುಗಳು ಈಖಾತೆಯ ಕೆಲಸಗಳಾಗಿರುತ್ತವೆ. ಈ ಖಾತೆಯ



**ವ್ಯಾಲಿ ತೆಗೆಯುವದು.**

ಮುಖ್ಯಾಧಿಕಾರಿಗೆ " ಸ್ಯಾನಿಟರಿ ಇನಸ್ಪೆಕ್ಟರ " ಎಂದೆನ್ನುವರು. ಇವನ ಕೈಕೆಳಗೆ ವ್ಯೈಲಿತೆಗೆಯುವ ಡಾಕ್ಟರರಿರುವರು. ಅವರಿಗೆ " ವ್ಯಾಕ್ಸಿನೇಟರ " ಎಂದೆನ್ನುವರು.

( ೧೦ ) **ಫಾರೆಸ್ಟ ಖಾತೆ:—** ಅಡವಿಯ ಸಂರಕ್ಷಣೆ ಮಾಡುವದು, ದನಕರುಗಳು ಮೇಯುವದಕ್ಕೆ ಅವಶ್ಯವಿರುವ ಭೂಮಿಯನ್ನು ಕಾಯುವದು, ಹೊಸಗಿಡಗಳನ್ನು ಹಚ್ಚುವದು ಮತ್ತು ಅವುಗಳ ರಕ್ಷಣೆಮಾಡುವದು ಇವು ಈ ಖಾತೆಯ ಕೆಲಸಗಳಾಗಿರುತ್ತವೆ. ಕಾಯ್ದಿಡಲ್ಪಟ್ಟ ಅಡವಿಗೆ " ಫಾರೆಸ್ಟ " ಎಂದೆನ್ನುವರು. ಈ ಖಾತೆಯಲ್ಲಿ ಫಾರೇಸ್ಟರೇಂಜ ಆಫೀಸರ, ರಾವುಂಡಗಾರ್ಡ ಮೊದಲಾದ ಅಧಿಕಾರಿಗಳಿರುತ್ತಾರೆ.

( ೧೧ ) **ಶೇತಕಿಖಾತೆ:—** ಪೈರುಗಳ ಬೆಳವಣಿಗೆ ಮಾಡುವದು, ರೋಗಗಳು ಇಲ್ಲದಂತೆ ಮಾಡಲು ಪ್ರಯೋಗಗಳನ್ನು ಮಾಡುವದು, ಸುಧಾರಿಸಿದ ಒಕ್ಕಲತನದ ಆಯುಧ ಹಾಗು ಗೊಬ್ಬರ ಇವುಗಳ ಮಹತ್ವವನ್ನು ತಿಳಿಸಿ ಹೇಳುವದು; ಒಟ್ಟಿನಲ್ಲಿ ಒಕ್ಕಲತನವನ್ನು ಸುಧಾರಿಸುವದೇ ಈ ಖಾತೆಯ ಉದ್ದೇಶವಾಗಿರುತ್ತದೆ. ಮುಖ್ಯಾಧಿಕಾರಿಯು " ಡಿಸ್ಟ್ರಿಕ್ಟ ಓವ್ಹರಸೀಅರ " ಎಂಬವನಾಗಿದ್ದು ಅವನ ಕೈಕೆಳಗೆ ಓವ್ಹರಸೀಅರರಿರುತ್ತಾರೆ. ಪ್ರಾಥಮಿಕ

ಶಾಲೆಗಳಲ್ಲಿ ಶೇತಕಿ ಶಿಕ್ಷಣದ ಪ್ರಸಾರವಾಗಬೇಕೆಂದು ಕೆಲವು ಕಡೆಯಲ್ಲಿ ಶೇತಕಿಕ್ಲಾಸುಗಳನ್ನು ಆರಂಭಿಸಿರುತ್ತಾರೆ.

ಪ್ರಶ್ನ:—(೧) ಪೋಲೀಸಖಾತೆಯ ಅಧಿಕಾರಿಗಳು ಯಾರು? ಮತ್ತು ಅವರು ಮಾಡತಕ್ಕ ಕೆಲಸಗಳು ಯಾವವು? ೨ ಶಾಲಾಖಾತೆಯ ಬಗ್ಗೆ ಗೊತ್ತಾದ ಸಂಗತಿ ಹೇಳಿರಿ. ೩ ಆರೋಗ್ಯಖಾತೆಯ ಕೆಲಸಗಳನ್ನು ಹೇಳಿರಿ. ೪ ಇರಿಗೇಶನ್‌ಖಾತೆಯವರು ಮಾಡತಕ್ಕ ಕೆಲಸಗಳು ಯಾವವು? ೫ ಶೇತಕಿ ಖಾತೆಯ ಮುಖ್ಯ ಉದ್ದೇಶವೇನು?

---

## ೧೯ ನೆಯ ಪಾಠ.

### ಮ್ಯುನಿಸಿಪಾಲಿಟಿ ಹಾಗು ಲೋಕಲ್‌ಬೋರ್ಡ.


ಮ್ಯುನಿಸಿಪಾಲಿಟಿ.

ಪಟ್ಟಣಗಳಲ್ಲಿ ಸ್ವಚ್ಛತೆಯನ್ನಿರಿಸುವದು, ಶಿಕ್ಷಣ, ಔಷಧೋಪಚಾರ ಮೊದಲಾದ ಸಾರ್ವಜನಿಕ ಕೆಲಸಗಳನ್ನು ಈ ಮೊದಲು ಸರಕಾರದವರು ಮಾಡುತ್ತಿದ್ದರು. ಆದರೆ ಇಂಥ ಕೆಲಸಗಳ ಶಿಕ್ಷಣವು ಜನರಿಗೆ ದೊರೆಯಬೇಕೆಂದು ಸರಕಾರದವರಿಂದ ಪಟ್ಟಣ ಹಾಗು ಕೆಲವು ದೊಡ್ಡ ಊರುಗಳಲ್ಲಿ ಮುನಿಸಿಪಾಲಿಟಿ ಸ್ಥಾಪಿಸಬೇಕೆಂಬ ಕಾಯಿದೆಯು ಮಾಡಲ್ಪಟ್ಟಿತು. ಈ ಕಾಯಿದೆಗನುಸರಿಸಿ ಸದ್ಯಕ್ಕೆ ನಮ್ಮ ಜಿಲ್ಹೆಯೊಳಗೆ ಬೆಳಗಾಂವ, ಬೈಲಹೊಂಗಲ, ಸವದತ್ತಿ, ಗೋಕಾಕ, ನಿಪ್ಪಾಣಿ, ಅಥಣಿ ಇವುಗಳಲ್ಲಿ ಮ್ಯುನಿಸಿಪಾಲಿಟಿಗಳಿರುತ್ತವೆ.

ಚಿಕ್ಕ ಮಕ್ಕಳ ಶಿಕ್ಷಣದ ಸಲುವಾಗಿ ಪ್ರಾಥಮಿಕ ಶಾಲೆಗಳನ್ನು ನಡೆಯಿಸುವದು, ಧರ್ಮಾರ್ಥ ದವಾಖಾನೆಗಳನ್ನು ಸ್ಥಾಪಿಸಿ ಬಡಬಗ್ಗರಿಗೆ ಪುಕ್ಕಟೆಯಾಗಿ ಔಷಧ ದೊರೆಯುವ ಅನುಕೂಲತೆ ಮಾಡುವದು, ಪಟ್ಟಣದೊಳಗಿನ

ಮಾರ್ಗಗಳನ್ನು ಸ್ವಚ್ಛವಾಗಿರಿಸುವದು, ಊರೊಳಗಿನ ಹೊಲಸು ನೀರು ಹಾಗು ಕಸಕಡ್ಡಿಗಳನ್ನು ಊರ ಹೊರಗೆ ಚಲ್ಲಿಸುವದು, ಪಟ್ಟಣದಲ್ಲಿ ದೀವಿಗೆಗಳನ್ನು ಹಚ್ಚಿಸುವದು, ಎಲ್ಲಿ ನೀರಿನ ಅನುಕೂಲತೆಯು ಇರುವದಿಲ್ಲವೋ ಅಲ್ಲಿ ಸ್ವಚ್ಛ ನೀರಿನ ಪೂರೈಕೆಯನ್ನು ಮಾಡುವದು, ಜನನ-ಮರಣದ ರಜಿಸ್ಟರವನ್ನಿರಿಸುವದು, ಚಿಕ್ಕ ಮಕ್ಕಳಿಗೆ ವ್ಯೈಲಿ ತೆಗೆಯಿಸುವದು, ಪ್ಲೇಗ, ಮಾರೀಬೇನೆ ಮೊದಲಾದ ರೋಗಗಳುಂಟಾದಾಗ ಅವುಗಳ ಬಗ್ಗೆ ಯೋಗ್ಯ ಉಪಾಯ ಯೋಜಿಸುವದು ಇವೇ ಮೊದಲಾದವುಗಳು ಮ್ಯುನಿಸಿಪಾಲಿಟಿಯ ಕೆಲಸಗಳಾಗಿರುತ್ತವೆ.

ಮ್ಯುನಿಸಿಪಾಲಿಟಿಗೆ ತನ್ನ ಕೆಲಸಗಳ ಸಲುವಾಗಿ ಬೇಕಾಗುವ ಹಣವನು ವಸೂಲ ಮಾಡುವ ಅಧಿಕಾರವಿರುತ್ತದೆ. ಅದು ಮನೆಪಟ್ಟಿ, ವಾಹನಗಳ ಮೇಲಿನಪಟ್ಟಿ, ನೀರಿನಪಟ್ಟಿ, ಊರೊಳಗೆ ಬರುವಂಥ ಸರಕುಗಳ ಮೇಲಿನ ಜಕಾತಿ ಮೊದಲಾದವುಗಳಿಂದ ಹಣ ವಸೂಲ ಮಾಡುವದು. ಇದಕ್ಕೆ ಸರಕಾರದವರಿಂದ ಆ ಉತ್ಪನ್ನದ ಇಮ್ಮಡಿ ಸಹಾಯ ದೊರೆಯುವದು.

ಮ್ಯುನಿಸಿಪಾಲಿಟಿಯ ಆಡಳಿತೆಯ ಸಲುವಾಗಿ ಒಂದು ಕಮೀಟಿ ಅಥವಾ ಸಭೆಯಿರುವದು. ಅದರೊಳಗಿನ ಸಭಾಸದರನ್ನು ಊರೊಳಗಿನ ಮನೆಪಟ್ಟಿ ಕೊಡುವಂಥ ಜನರು ಆರಿಸಿಕೊಡುವರು. ಸ್ವಲ್ಪ ಸಭಾಸದರ ಆರಿಸುವಿಕೆಯು ಸರಕಾರದವರಿಂದಾಗುವದು. ಈ ಆರಿಸುವಿಕೆಯು ಪ್ರತಿ ಮೂರು ವರ್ಷಕ್ಕೊಮ್ಮೆ ಆಗುವದು.

ಮ್ಯುನಿಸಿಪಾಲಿಟಿಯು ಪಟ್ಟಣಗಳಲ್ಲಿ ಯಾವ ಕೆಲಸಗಳನ್ನು ಮಾಡುವದೋ, ಆ ಕೆಲಸಗಳನ್ನೇ ಮಾಡುವದರ ಸಲುವಾಗಿ ಜಿಲ್ಹೆಯಲ್ಲಿ ಲೋಕಲ್ ಬೋರ್ಡ ಎಂಬ ಹೆಸರಿನ ಸಂಸ್ಥೆಯಿರುವದು. ಈ ಸಂಸ್ಥೆಯು ಜಿಲ್ಹೆಯ ಆಡಳಿತವನ್ನು ನೋಡುತ್ತಿರುವದರಿಂದ ಇದಕ್ಕೆ "ಜಿಲ್ಹಾ ಲೋಕಲ್‌ಬೋರ್ಡ" ಎಂದೆನ್ನುತ್ತಾರೆ. ಪ್ರತಿಯೊಂದು ತಾಲೂಕಿನಲ್ಲಿ ನಡೆಯುವ ಕೆಲಸಗಳ ಮೇಲಿಚಾರಣೆ ಮಾಡುವದರ ಸಲುವಾಗಿ ತಾಲೂಕ ಲೋಕಲ್‌ಬೋರ್ಡಗಳಿರುತ್ತವೆ.

ಜನರ ಶಿಕ್ಷಣದ ಸಲುವಾಗಿ ಪ್ರಾಥಮಿಕ ಶಾಲೆಗಳನ್ನು ನಡೆಯಿಸುವದು, ಶಾಲೆಯ ಇಮಾರತಿಗಳನ್ನು ಕಟ್ಟಿಸುವದು, ಜನರ ಸಲುವಾಗಿಯೂ, ದನಗಳ

ಸಲುವಾಗಿಯೂ ದವಾಖಾನೆಗಳನ್ನು ಸ್ಥಾಪಿಸುವದು, ಬಾವಿ, ಕೆರೆ, ಧರ್ಮ ಶಾಲೆ, ಸಂತೆ ನೆರೆಯುವ ಸ್ಥಳ ಮೊದಲಾದವುಗಳನ್ನು ಕಟ್ಟಿಸುವದು, ಜಿಲ್ಹೆಯ ಹೊರಗೆ ಹೋಗದಂಥ ಪಕ್ಕಾ ಮಾರ್ಗಗಳ ವ್ಯವಸ್ಥೆಯನ್ನಿರಿಸುವದು, ಎಲ್ಲಿ ಪಕ್ಕಾ ಮಾರ್ಗಗಳಿರುವದಿಲ್ಲವೋ ಅಲ್ಲಿ ಮಾರ್ಗಗಳನ್ನು ತಯಾರಿಸುವದು. ಮೈಲಿ ತೆಗೆಯಿಸುವದು, ಬರಗಾಲದ ಕೆಲಸಗಳನ್ನು ಹೊರಡಿಸುವದು, ಇವೇ ಮೊದಲಾದವುಗಳು ಲೋಕಲ್‌ಬೋರ್ಡಿನ ಕೆಲಸಗಳಾಗಿರುತ್ತವೆ.

ಲೋಕಲ್‌ಬೋರ್ಡು ತಾನು ಮಾಡಬೇಕಾಗುವ ಕೆಲಸಗಳ ಸಲುವಾಗಿ ಒಕ್ಕಲಿಗರಿಂದ ಹಣ ವಸೂಲಮಾಡುತ್ತದೆ. ಹೊಲದ ತೆರಿಗೆಯ ಮೇಲೆ ರೂಪಾಯಿಗೆ ೨ ಆಣೆಯಂತೆ ಹೆಚ್ಚಿಗೆ ಹಣವು ತೆಗೆದುಕೊಳ್ಳಲ್ಪಡುವದು. ಆ ಹಣಕ್ಕೆ "ಲೋಕಲ್‌ಫಂಡ" ಎಂದೆನ್ನುತ್ತಾರೆ. ಸರಕಾರದವರು ಲೋಕಲ್‌ಫಂಡಿನ ಹಣವನ್ನು ಭೂಮಿಯ ತೆರಿಗೆಯ ಸಂಗಡ ವಸೂಲ ಮಾಡಿಕೊಡುವರು. ಮತ್ತು ಹರಗೋಲು, ಜಕಾತಕಟ್ಟಿ, ಕಲ್ಲಿನ ಕಣಿ, ಕೊಂಡವಾಡೆ ಮೊದಲಾದವುಗಳಿಂದಾದರೂ ಲೋಕಲ್‌ಬೋರ್ಡಿಗೆ ಹಣ ದೊರೆಯುವದು. ಸರಕಾರದವರಿಂದ ಎಲ್ಲ ಹಣದ ೩ ದಷ್ಟು ಹಣವು ಸಹಾಯವೆಂದು ದೊರೆಯುತ್ತದೆ.

ಮ್ಯುನಿಸಿಪಾಲಿಟಿಯಂತೆ ಲೋಕಲ್‌ಬೋರ್ಡಿನ ಆಡಳಿತವನ್ನು ನೋಡುವಂಥ ಒಂದು ಸಭೆಯಿರುವದು. ಅದರ ಸಭಾಸದರನ್ನು ಲೋಕಲ್‌ಫಂಡ ಕೊಡುವಂಥ ಜನರು ತಮ್ಮ ವತಿಯಿಂದ ಆರಿಸಿಕೊಡುವರಲ್ಲದೆ ಸ್ವಲ್ಪ ಸಭಾಸದರ ಆರಿಸುವಿಕೆಯು ಸರಕಾರದವರಿಂದಾಗುವದು. ನಮ್ಮ ಜಿಲ್ಹೆಯಲ್ಲಿ ಜನರ ವತಿಯಿಂದ ಆರಿಸಲ್ಪಟ್ಟಂಥ ಸಭಾಸದರು ೧೯ ಜನರಿರುವರಲ್ಲದೆ ಸರಕಾರದವರಿಂದ ಆರಿಸಲ್ಪಟ್ಟಂಥ ಸಭಾಸದರು ೬ ಜನರಿರುವರು. ಈ ಎಲ್ಲ ಜನರ ಅಂದರೆ ೨೪ ಜನ ಸಭಾಸದರ ಬೋರ್ಡವಿರುವದು. ಈ ಬೋರ್ಡಿನ ಸಭಾಸದರು ತಮ್ಮ ಸಮ್ಮತಿಯಿಂದ ೧೪ ಜನ ಸಭಾಸದರನ್ನು ಆರಿಸಿ, ಅವರದೊಂದು ಸ್ಕೂಲ ಬೋರ್ಡ ತಯಾರಿಸುವರು. ಸ್ಕೂಲಬೋರ್ಡನಲ್ಲಿ ಎಲ್ಲ ಜಾತಿಯ ಸಭಾಸದರಿರದಿದ್ದರೆ ಸರಕಾರದವರು ಮತ್ತೆ ಮೂರು ಜನ ಸಭಾಸದರನ್ನು ಆರಿಸುವರು. ಈ ಎಲ್ಲ ಜನರ ಅಂದರೆ ೧೭ ಜನ ಸಭಾಸದರ ಸ್ಕೂಲಬೋರ್ಡ ಆಗುವದು. ಈ ಸಭಾಸದರು ತಮ್ಮೊಳಗಿಂದ ಚೇಅರಮನ್, ವ್ಹಾಯಿಸಚೇಅರಮನ್ ಮೊದ

ಲಾದವರನ್ನು ಆರಿಸುವರು. ಈ ಸ್ಕೂಲಬೋರ್ಡವು ಶಿಕ್ಷಣವಿಷಯದ ಎಲ್ಲ ಕೆಲಸಗಳನ್ನು ನೋಡುವದು. ಶಾಲೆಗಳ ಪ್ರತ್ಯಕ್ಷ ಕೆಲಸವನ್ನು ನೋಡುವದರ ಸಲುವಾಗಿ ಸರಕಾರದವರ ಸಮ್ಮತಿಯಿಂದ ಸ್ಕೂಲಬೋರ್ಡವು ಒಬ್ಬ ಅಧಿಕಾರಿಯನ್ನು ನೇಮಿಸುವದು. ಆ ಅಧಿಕಾರಿಗೆ "ಅಡ್‍ಮಿನಿಸ್ಟ್ರೇಟಿವ್ಹ ಆಫೀಸರ" ಎಂದೆನ್ನುವರು.

ಪ್ರಶ್ನ:—೧ ಮ್ಯುನಿಸಿಪಾಲಿಟಿ ಸ್ಥಾಪಿಸುವ ಉದ್ದೇಶವೇನು? ೨ ಮ್ಯುನಿಸಿಪಾಲಿಟಿಯು ಮಾಡತಕ್ಕ ಕೆಲಸಗಳು ಯಾವವು? ೩ ನಮ್ಮ ಜಿಲ್ಹೆಯ ಲೋಕಲ್ ಬೋರ್ಡದ ರಚನೆ ಹೇಳಿರಿ. ೪ ಲೋಕಲ್‍ಬೋರ್ಡಕ್ಕೆ ಯಾವ ಯಾವ ಕಡೆಯಿಂದ ಹಣ ದೊರೆಯುತ್ತದೆ? ೫ ಸ್ಕೂಲಬೋರ್ಡು ಹೇಗೆ ತಯಾರಾಗುವದು?

---

# ೨ನೆಯ ಭಾಗ.

# ವಿಶೇಷ ವರ್ಣನೆ.

## ೨೦ನೆಯ ಪಾಠ.

### ಅಥಣಿ ತಾಲೂಕು.



**ಸ್ಥಾನ:**—ಈ ತಾಲೂಕು ಬೆಳಗಾಂವ ಜಿಲ್ಹೆಯ ಉತ್ತರಭಾಗದಲ್ಲಿರುವದು.

**ಮೇರೆ:**—ಉತ್ತರಕ್ಕೆ— ಸಾತಾರೆ ಜಿಲ್ಹೆ ಹಾಗು ಜತ್ತಜಹಾಗೀರವು. ಪಶ್ಚಿಮಕ್ಕೆ—ಚಿಕ್ಕೋಡಿ ತಾಲೂಕು ಮತ್ತು ಕರವೀರ ಇಲಾಖೆಯ ಭಾಗ. ದಕ್ಷಿಣಕ್ಕೆ—ಕೊಲ್ಹಾಪುರ ಸಂಸ್ಥಾನದ ಭಾಗ, ಗೋಕಾಕ ತಾಲೂಕು, ಜಮಖಿಂಡಿಜಹಾಗೀರು. ಪೂರ್ವಕ್ಕೆ—ಜಮಖಿಂಡಿ ಜಹಾಗೀರ, ವಿಜಾಪುರ ಜಿಲ್ಹೆ.

**ವಿಸ್ತಾರ:**—ಇದರ ಕ್ಷೇತ್ರವು ೭೭೯ ಚೌರಸ ಮೈಲು.

**ಜನಸಂಖ್ಯೆಯ ಪ್ರಮಾಣ:**—ಚೌ. ಮೈಲಿಗೆ ಸರಾಸರಿ ೧೫೮ಜನರು.

**ಪ್ರಾಕೃತಿಕಸ್ವರೂಪ:**—ಪಶ್ಚಿಮದಲ್ಲಿ ಗಿಡಗಳಿಲ್ಲದ ಹರವಾದ ಗುಡ್ಡಗಳಿರುವವು. ಅಥಣಿಯ ಸಮೀಪದಲ್ಲಿ ಸ್ವಲ್ಪ ಗುಡ್ಡಗಳಿರುತ್ತವೆ. ಉಳಿದ ಭಾಗವು ಬೈಲುಪ್ರದೇಶವಾಗಿದ್ದು ನೆಲವು ತೆರೆಗಳ ಹಾಗೆ ತಗ್ಗುದಿನ್ನೆಗಳುಳ್ಳದ್ದಾಗಿದೆ. ಇಲ್ಲಿ ಹರಿಯುವ ಹಳ್ಳಗಳ ಮೇಲಿಂದ ಭೂಮಿಯು ಉತ್ತರದಿಂದ ದಕ್ಷಿಣದ ಕಡೆಗೆ ಇಳುಕಲಾಗಿರುವಂತೆ ಕಂಡುಬರುವದು. ಕೃಷ್ಣಾನದಿಯು ದಕ್ಷಿಣಮೇರೆಯಲ್ಲಿದ್ದು ಪೂರ್ವಕ್ಕೆ ಹರಿಯುವದರಿಂದ ದಂಡೆಯ ಪ್ರದೇಶವು ಪೂರ್ವದ ಕಡೆಗೆ ಇಳುಕಲಾಗಿರುವದು. ಇಲ್ಲಿ ಬಹುತರ ಎಲ್ಲಕಡೆಗೆ ಕರೇಭೂಮಿಯಿರುವದು. ನದಿಯ ಎರಡೂ ಬದಿಗಳಲ್ಲಿ ೩-೪ ಮೈಲುಗಳವರೆಗೆ ಉತ್ತಮವಾದ ಸಣ್ಣರೆಯುಂಟು.

**ಹವೆ:**— ಇಲ್ಲಿ ಒಣ ಹಾಗು ಉಷ್ಣ ಹವೆಯಿದ್ದು ಆರೋಗ್ಯಕ್ಕೆ ಹಿತಕರವಾಗಿರುವದು.

**ಮಳೆ:**—ಗುಡ್ಡ, ಗಿಡಗಂಟಿಗಳಿರದ ಮೂಲಕ ಮಳೆಯು ತೀರ ಕಡಿಮೆ. ಅಂದರೆ ಸರಾಸರಿ ೧೫–೨೫ ಇಂಚು ಮಳೆಯಾಗುವದು.

**ಹೊಳೆ-ಹಳ್ಳಗಳು:**—ಕೃಷ್ಣಾನದಿಯು ಪೂರ್ವದ ಕಡೆಗೆ ಹರಿದಿರುವದು. ಇದರ ಧಡದಲ್ಲಿ ಊರುಗಳು ದಟ್ಟಾಗಿರುತ್ತವೆ. ಯಾಕೆ? ಇದಕ್ಕೆ ಅಘಹರಣಿಹಳ್ಳ, ಬಡಚೀಹಳ್ಳ, ಕೊಕಟನೂರಹಳ್ಳ ಮೊದಲಾದವುಗಳು ಕೂಡುತ್ತವೆ.

**ಬೆಳೆ:**— ಇಲ್ಲಿ ಹತ್ತಿಯ ಬೆಳೆಯು ವಿಶೇಷ. ಗೋದಿ, ಜೋಳಗಳ ಬೆಳೆಗಳಾದರೂ ಮುಖ್ಯವಾಗಿರುತ್ತವೆ. ಕಡಲೆ, ಕುಸುಬೆ, ಅಕ್ಕಿಡಿಕಾಳು, ನೆಲಗ

ಡಲೆ ಮೊದಲಾದವುಗಳು ಬೆಳೆಯುತ್ತವೆ. ಬೀಡಗ, ಮಂಗಸೂಳಿಗಳಲ್ಲಿ ಎಲೆ ದೋಟಗಳುಂಟು.

**ಜನರು:**—ಎಲ್ಲ ಜಾತಿಯ ಜನರಿರುವರು. ಇವರು ವಿಶೇಷವಾಗಿ ಮಾಳಿಗೆಯ ಮನೆಗಳಲ್ಲಿರುವರು. ಮುಖ್ಯ ಆಹಾರವು ಜೋಳವಾಗಿರುವದು. ಉಷ್ಣ ಹವೆಯಲ್ಲಿರುವದರಿಂದ ಆಲಸ್ಯವುಳ್ಳವರಾಗಿರುವರು.

**ಭಾಷೆ:**—ವಾಯುವ್ಯ ಭಾಗಕ್ಕೆ ಮರಾಠಿ ಭಾಷೆಯ ಪ್ರದೇಶವು ಹೊಂದಿರುವದರಿಂದ ಆ ಭಾಗದಲ್ಲಿ ಮರಾಠಿ ಭಾಷೆಯೂ, ಉಳಿದ ಭಾಗದಲ್ಲಿ ಕನ್ನಡ ಭಾಷೆಯೂ ನಡೆಯುವವು.

**ಉದ್ಯೋಗ:**—ಒಕ್ಕಲತನವು ಮುಖ್ಯ ಉದ್ಯೋಗವಾಗಿರುವದು.

**ಕಾರಖಾನೆ:**—ಅಥಣಿ, ಕಾಗವಾಡ, ಕುಡಚಿಗಳಲ್ಲಿ ಹತ್ತಿ ಅರೆಯುವ ಹಾಗು ಅರಳೆಯ ಗಂಟು ಕಟ್ಟುವ ಗಿರಣಿಗಳುಂಟು.

**ಉಗಬಂಡಿಯ ಮಾರ್ಗ:**—ಇದು ಸಾಧಾರಣವಾಗಿ ಉತ್ತರದಿಂದ ದಕ್ಷಿಣಕ್ಕೆ ಹೋಗಿರುವದು. ಈ ತಾಲೂಕಿನಲ್ಲಿ ಶೇಡಬಾಳ, ಕುಡಚಿ ಸ್ಟೇಶನಗಳುಂಟು.

**ಮುಖ್ಯ ಊರು:**—**ಅಥಣಿ**—ಇದು ತಾಲೂಕಿನ ಮುಖ್ಯ ಸ್ಥಳವು. ಇಲ್ಲಿ ಮ್ಯುನಿಸಿಪಾಲಿಟಿ, ಹಾಯಸ್ಕೂಲ್, ಜನರ ಹಾಗು ದನಗಳ ದವಾಖಾನೆಗಳುಂಟು. ತಾಲೂಕಿನ ಕಚೇರಿಗಳೂ ಪೋಸ್ಟ್ ಆಫೀಸೂ ಇರುವವು. ಕಾಳು-ಕಡಿ ಹಾಗು ಹತ್ತಿಯ ವ್ಯಾಪಾರವು ಹೆಚ್ಚಾಗಿರುವದು. ಸಿದ್ಧೇಶ್ವರನ ಗುಡಿಯು ಪ್ರಸಿದ್ಧವಾಗಿದ್ದು ಆ ದೇವರಿಗೆ ಮುಸಲ್ಮಾನರೂ ಸಹ ನಡಕೊಳ್ಳುವರು. ಸಂತೆಯ ದಿವಸ ದನಗಳ ವ್ಯಾಪಾರವು ಚನ್ನಾಗಿ ಆಗುವದು. **ಐನಾಪೂರ**—ಇಲ್ಲಿ ಹಾಯಸ್ಕೂಲು ಇರುವದು. ಪೀರಕಾಜಿ ಎಂಬ ಸತ್ಪುರುಷನ ಗೋರಿಯುಂಟು. ಸಂತೆಯ ದಿವಸ ವ್ಯಾಪಾರವು ತಕ್ಕಮಟ್ಟಿಗೆ ಆಗುವದು. ಪೋಸ್ಟ ಆಫೀಸು ಉಂಟು. **ಕಾಗವಾಡ**—ಇಲ್ಲಿ ಬ್ರಹ್ಮನಾಥ, ಸಟವಾಯಿ ಎಂಬ ಎರಡು ನೋಡತಕ್ಕಂಥ ಗುಡಿಗಳಿವೆ. ಬ್ರಹ್ಮನಾಥನ ಗುಡಿಯ ನೆಲಮನೆಯಲ್ಲಿ ಶಾಂತಿನಾಥನ ಭವ್ಯ ಮೂರ್ತಿಯುಂಟು. ಪ್ರತಿವರ್ಷ ಮಾಘಮಾಸದಲ್ಲಿ



**ಶಾಂತಿನಾಥ ತೀರ್ಥಂಕರರು.**



ಬ್ರಹ್ಮಾನಂದ ಸ್ವಾಮಿ.

ಸಟವಾಂಬಿಯ ಜಾತ್ರೆಯಾಗುವದು ಪೋಸ್ಟಆಫೀಸು ಹಾಗು ಶೇತಕಿಕ್ಲಾಸು ಇರುವವು. ಸಂತೆಯು ದಿವಸ ಕಾಳು-ಕಡಿ ದನಗಳ ವ್ಯಾಪಾರವು ಚನ್ನಾಗಿ ಆಗುವದು. ಹತ್ತಿಯ ವ್ಯಾಪಾರವು ಹೆಸರಾದದ್ದು. ಊರ ಪಶ್ಚಿಮಕ್ಕೆ ಪಟವರ್ಧನರ ಸವಬಾಗ ತೋಟದಲ್ಲಿ ಕರ್ನಾಟಕದೊಳಗೆ ಹೆಸರಾದ ಬ್ರಹ್ಮಾನಂದ ಸ್ವಾಮಿಯವರ ಸಮಾಧಿಯುಂಟು. ಭಾದ್ರಪದ ವದ್ಯ ಅಮಾವಾಸ್ಯೆಗೆ ಪುಣ್ಯತಿಥಿಯಾಗುವದು. **ಶೇಡಬಾಳ**–ಇಲ್ಲಿ ಬಸವನ ಗುಡಿ, ಜೈನ ಅನಾಥ ವಿದ್ಯಾರ್ಥಿಗಳ ಆಶ್ರಮ, ಸಂಸ್ಕೃತ ಪಾಠಶಾಲೆ, ಇಂಗ್ಲಿಷಕ್ಲಾಸು, ಪೋಸ್ಟ ಆಫೀಸು ಇರುವವು. ಶಿವರಾತ್ರಿಯಲ್ಲಿ ಬಸವನ ಜಾತ್ರೆಯಾಗುವದು. ಸಂತೆಯ

ದಿವಸ ಸಾಧಾರಣ ವ್ಯಾಪಾರವಾಗುವದು. **ಕುಡಚಿ**— ಕೃಷ್ಣಾನದಿಯ ದಂಡೆಗಿರುವ ಜಾಲಿ, ಹುಣಸೆ ಮರಗಳ ಬನದಲ್ಲಿ ಶೇಖಮಹಮ್ಮದ ಪೀರಜಾದೆ ಎಂಬ ಮುಸಲ್ಮಾನ ಸತ್ಪುರುಷನ ಗೋರಿಯೂ, ಬುಲಕ್ ಪಟ್ಟಣದ ರಾಜಕನ್ನಿಕೆಯ ಗೋರಿಯೂ ಇರುವವು. ಪ್ರತಿವರ್ಷ "ಉರುಸು" ಆಗುವದು. ಉಗೆಬಂಡಿಯ ಪೂಲು ನೋಡತಕ್ಕಂಥಾದ್ದಿರುವದು. ಫೌಜದಾರ ಕಚೇರಿ, ಪೋಸ್ಟಆಫೀಸು ಹಾಗು ಉರ್ದುಶಾಲೆಯಲ್ಲಿ ಇಂಗ್ಲಿಷಕ್ಲಾಸು ಇರುವವು. ಸಂತೆಯ ದಿವಸ ವ್ಯಾಪಾರವು ತಕ್ಕಮಟ್ಟಿಗೆ ಆಗುವದು. ಹತ್ತಿಯ ವ್ಯಾಪಾರವು ಹೆಚ್ಚಾಗಿರುವದು. ಜಮಖಾನೆಗಳು ತಯಾರಾಗುವವು. ಬದನೀಕಾಯಿ ಪ್ರಸಿದ್ಧ. **ಮಂಗಸೂಳಿ**— ಇಲ್ಲಿ ಮಲ್ಲಯ್ಯನ ಗುಡಿಯು ಪ್ರಸಿದ್ಧ. ಪ್ರತಿವರ್ಷ ಚೈತ್ರಮಾಸದಲ್ಲಿ ದೊಡ್ಡ ಜಾತ್ರೆ ನೆರೆಯುವದು. ಜಾತ್ರೆಯಲ್ಲಿ ದನಗಳ ವ್ಯಾಪಾರವು ವಿಶೇಷವಾಗುವದು. **ಕೊಕಟನೂರು**— ಇಲ್ಲಿ ಲಗಾಮು, ಆಡಕೊತ್ತುಗಳು ತಯಾರಾಗುತ್ತವೆ. ಪ್ರತಿವರ್ಷ ಎಲ್ಲಮ್ಮನ ಜಾತ್ರೆಯು ನೆರೆಯುವದು. **ಸಪ್ತಸಾಗರ**— ಇದು ಕ್ಷೇತ್ರಸ್ಥಾನವಾಗಿದ್ದು ಇಲ್ಲಿಯ ನದಿಯ ಸ್ನಾನವು ಮಹತ್ವದ್ದಾಗಿರುವದು. ಊರ ಸಮೀಪದಲ್ಲಿ ಭಸ್ಮವು ದೊರೆಯುವದು. **ಶೂರಪಾಲಿ**— ಇದು ಕ್ಷೇತ್ರಸ್ಥಾನವು. ನರಸಿಂಹದೇವರ ಗುಡಿಯುಂಟು. ಈ ದೇವರ ರಥೋತ್ಸವವು ವೈಶಾಖಮಾಸದಲ್ಲಾಗುತ್ತದೆ. ಇವುಗಳಲ್ಲದೆ ಬೇರೆ ಎಷ್ಟೋ ಸಣ್ಣ ದೊಡ್ಡ ಊರುಗಳುಂಟು. ( ನಕಾಶೆ ನೋಡಿರಿ. )

**ವ್ಯಾಪಾರದ ಜೀನಸು**:— ಹತ್ತಿ, ಜೋಳ, ಗೋದಿ, ಬೆಣ್ಣೆ, ವಿಳ್ಯದ ಎಲೆ, ಎಣೆಯ ಕಾಳು ಮೊದಲಾದವುಗಳು.

**ಪ್ರಶ್ನೆ**:— ೧ ಈ ತಾಲೂಕಿನ ಭೂಮಿಯು ಯಾವ ಯಾವ ಕಡೆಗೆ ಇಳುಕಲಾಗಿರುವದು? ಯಾಕೆ? ೨ ಯಾವ ಭಾಗದಲ್ಲಿ ಊರುಗಳು ಹೆಚ್ಚಾಗಿವೆ? ಯಾಕೆ? ೩ ಇಲ್ಲಿ ಎಂಥ ಕಾರಖಾನೆಗಳಿರುವವು? ಯಾಕೆ? ೪ ಕುಡಚಿ, ಕೊಕಟನೂರ ಇವು ಯಾತರ ಬಗ್ಗೆ ಹೆಸರಾಗಿವೆ? ೫ ವ್ಯಾಪಾರದ ಜೀನಸು ಹೊರಗೆ ಹೋಗಲು ಯಾವ ಬಗೆಯ ಸಾಧನಗಳಿರುವವು?

---

# ೨೧ ನೆಯ ಪಾಠ.

## ಚಿಕ್ಕೋಡಿ ತಾಲೂಕು.




**ಸ್ಥಾನ:**— ಈ ತಾಲೂಕು ಅಥಣಿ ತಾಲೂಕಿನ ಪಶ್ಚಿಮ ಭಾಗದಲ್ಲಿರುವದು.

**ಮೇರೆ:**— ಉತ್ತರಕ್ಕೆ—ಕರವೀರ ಇಲಾಖೆ. ಪಶ್ಚಿಮಕ್ಕೆ—ಕರವೀರ ಇಲಾಖೆ. ದಕ್ಷಿಣಕ್ಕೆ— ಹುಕ್ಕೇರಿ ತಾಲೂಕು. ಪೂರ್ವಕ್ಕೆ— ಅಥಣಿ ತಾಲೂಕು, ಕರವೀರ ಇಲಾಖೆಯಭಾಗ, ಗೋಕಾಕ ತಾಲೂಕು.

**ವಿಸ್ತಾರ:**— ಇದರ ಕ್ಷೇತ್ರವು ೪೯೪ ಚೌರಸ ಮೈಲು.

**ಜನಸಂಖ್ಯೆಯ ಪ್ರಮಾಣ:**— ಚೌರಸ ಮೈಲಿಗೆ ಸರಾಸರಿ ೩೨೦ ಜನರು.

**ಪ್ರಾಕೃತಿಕ ಸ್ವರೂಪ:**— ಈ ತಾಲೂಕಿನ ದಕ್ಷಿಣ ಭಾಗದಲ್ಲಿ ಸಹ್ಯಾದ್ರಿಯ ಶಾಖೆಯಿದ್ದು ಅದರಲ್ಲಿಯ ರಾಮಲಿಂಗ, ಸ್ತವನಿಧಿ ಮೊದಲಾದ ಗುಡ್ಡಗಳು ಹೆಸರಾಗಿರುತ್ತವೆ. ಅಲ್ಲದೆ ಆಡಿಮಲ್ಲಯ್ಯನ ಗುಡ್ಡವಿರುವದು. ದಕ್ಷಿಣದಲ್ಲಿಯೂ, ಮಧ್ಯ-ಪಶ್ಚಿಮಭಾಗಗಳಲ್ಲಿಯೂ ಗುಡ್ಡಗಳಿದ್ದು, ಉಳಿದ ಭಾಗಗಳಲ್ಲಿ ಅಲ್ಲಲ್ಲಿಗೆ ಸಣ್ಣ ದೊಡ್ಡ ಗಿಡಗಳುಂಟು. ಈ ತಾಲೂಕು ಮಧ್ಯಭಾಗದಲ್ಲಿ ಉಬು

ಳ್ಳದ್ದಾಗಿರುತ್ತದೆ. ದಕ್ಷಿಣದ ಗುಡ್ಡದಸಾಲು ಚಿಕ್ಕೋಡಿಯ ವರೆಗೆ ಹೋಗಿರುವದು. ಹಳ್ಳಗಳು ಉತ್ತರಕ್ಕೆ ಹರಿಯುವದರಿಂದ ಭೂಮಿಯು ಉತ್ತರದ ಕಡೆಗೆ ಇಳುಕಲಾಗುತ್ತ ಹೋಗಿರುವದು. ದೂಧಗಂಗೆಯು ಪೂರ್ವಕ್ಕೆ ಹರಿಯುವದರಿಂದ ದಂಡೆಯ ಪ್ರದೇಶವು ಪೂರ್ವದ ಕಡೆಗೆ ಇಳುಕಲಾಗುತ್ತ ಹೋಗಿರುವದು. ಆಗ್ನೇಯ ಭಾಗದ ಭೂಮಿಯು ಅಲ್ಲಿಯ ಹಳ್ಳಗಳ ಹರಿಯುವಿಕೆಯ ಮೇಲಿಂದ ಆಗ್ನೇಯ ಕಡೆಗೆ ಇಳುಕಲಾಗಿರುವದೆಂದು ಕಂಡುಬರುವದು. ಹೊಳೆಯ ದಂಡೆಗಳ ಭೂಮಿಯು ಉತ್ತಮವಾಗಿದ್ದು, ಪಶ್ಚಿಮದಲ್ಲಿ ಕೆಂಪುಭೂಮಿ ಇರುವದು. ಉಳಿದ ಕಡೆಯಲ್ಲಿ ಕರೇಭೂಮಿಯಿರುವದು. ಇಲ್ಲಿಯ ಉತ್ತರ ಭಾಗದ ಭೂಮಿಯು ಮೇಲಾದದ್ದು.

**ಹವೆ:**—ಇಲ್ಲಿ ಒಣ ಹಾಗು ಸಾಧಾರಣ ಉಷ್ಣ ಹವೆಯಿರುವದು. ಪೂರ್ವಭಾಗದ ಹವೆಯು ಪಶ್ಚಿಮಭಾಗದ ಹವೆಗಿಂತ ಹೆಚ್ಚು ಉಷ್ಣವಿರುತ್ತದೆ. ಇಲ್ಲಿಯ ಹವೆಯು ಅಥಣಿ ತಾಲೂಕಿನ ಹವೆಯಷ್ಟು ಆರೋಗ್ಯಕ್ಕೆ ಹಿತಕರವಲ್ಲ.

**ಮಳೆ:**—ಪಶ್ಚಿಮ ಬದಿಗೆ ಸಹ್ಯಾದ್ರಿಯು ಸಮೀಪವಾಗಿರುವದರಿಂದ ಪಶ್ಚಿಮ ಭಾಗದಲ್ಲಿಯೂ, ದಕ್ಷಿಣದಲ್ಲಿ ಗುಡ್ಡಗಳಿರುವ ಸ್ಥಳದಲ್ಲಿಯೂ ಮಳೆಯು ಹೆಚ್ಚಾಗುತ್ತದೆ. ಪೂರ್ವದಕಡೆಗೆ ಹೋದಹಾಗೆ ಮಳೆಯು ಕಡಿಮೆ. ಇಲ್ಲಿ ಸರಾಸರಿ ೨೫-೩೫ ಇಂಚು ಮಳೆಯಾಗುವದು.

**ಹೊಳೆ-ಹಳ್ಳಗಳು:**—ಕೃಷ್ಣಾ, ದೂಧಗಂಗಾ, ವೇದಗಂಗಾ ಎಂಬ ಹೊಳೆಗಳಿದ್ದು, ಕೃಷ್ಣಾನದಿಯು ಸಾಧಾರಣವಾಗಿ ಉತ್ತರದಿಂದ ದಕ್ಷಿಣಕ್ಕೆ ಹರಿದಿರುವದು. ದೂಧಗಂಗೆಯು ಪಶ್ಚಿಮದಿಂದ ಪೂರ್ವಕ್ಕೆ ಹರಿದು ಕಲ್ಲೋಳ್ಳಿಯ ಹತ್ತರ ಕೃಷ್ಣೆಗೆ ಕೂಡುವದು. ಹೀಗೆ ಎರಡು ಹೊಳೆಗಳು ಕೂಡುವ ಸ್ಥಳಕ್ಕೆ ಸಂಗಮವೆನ್ನುವರು. ವೇದಗಂಗೆಯು ಪಶ್ಚಿಮದಿಂದ ಪೂರ್ವಕ್ಕೆ ಕೆಲವು ಅಂತರ ಹೋದಬಳಿಕ ಉತ್ತರಕ್ಕೆ ಹರಿದು ಕುನ್ನೂರದ ಹತ್ತರ ದೂಧಗಂಗೆಗೆ ಕೂಡುತ್ತದೆ. ಈ ಎಲ್ಲ ನದಿಗಳ ದಂಡೆಯ ಪ್ರದೇಶದಲ್ಲಿ ಊರುಗಳು ದಟ್ಟವಾಗಿವೆ. ಈ ತಾಲೂಕಿನಲ್ಲಿ ಹಳ್ಳಗಳು ಹೆಚ್ಚಾಗಿದ್ದು, ಅವುಗಳಲ್ಲಿ ಕರೋಸಿ, ನಿಪ್ಪಾಣಿ ಹಳ್ಳಗಳು ಹೆಸರಾಗಿರುತ್ತವೆ. ಹಳ್ಳಗಳ ಬಿಡಿಗಾಲಿವೆಗಳಿಂದಲೂ,

ದಂಡೆಯಲ್ಲಿರುವ ಬಾವಿಗಳಿಂದಲೂ ತೋಟಗಳ ಸಂಖ್ಯೆಯು ಹೆಚ್ಚಾಗಿರುವದು.

**ಬೆಳೆ:**— ಪಶ್ಚಿಮಭಾಗದಲ್ಲಿ ತಂಬಾಕ, ಕಬ್ಬು, ಮೆಣಸಿನಕಾಯಿ ವಿಶೇಷ. ಪೂರ್ವಭಾಗದಲ್ಲಿ ಜೋಳದ ಬೆಳೆಯು ಹೆಚಾಗಿರುವದು. ಹತ್ತಿ, ಗೋದಿ, ಕಡಲೆ, ನೆಲಗಡಲೆ, ಕುಸುಬೆ ಮೊದಲಾದ ಬೆಳೆಗಳು ಬರುತ್ತವೆ. ಕಬ್ಬೂರದ ಕಡೆಗೆ ಬಾಳೆಯ ತೋಟಗಳೂ, ಚಿಕ್ಕೋಡಿಯ ಸುತ್ತು ಮುತ್ತಲು ಎಲೆದೋಟಗಳೂ ಇರುತ್ತವೆ. ಈ ಜಿಲ್ಹೆಯಲ್ಲಿ ಚಿಕ್ಕೋಡಿಯ ವೀಳ್ಯದೆಲೆಗಳು ಪ್ರಸಿದ್ಧ.

**ಜನರು:**— ಇವರು ಹಂಚಿನ ಹಾಗು ಮಾಳಿಗೆಯ ಮನೆಗಳಲ್ಲಿರುವರು. ಮುಖ್ಯ ಆಹಾರವು ಜೋಳವಾಗಿರುವದು. ಪಶ್ಚಿಮಭಾಗದ ಜನರಿಗಿಂತ ಪೂರ್ವ ಭಾಗದ ಜನರಲ್ಲಿ ಆಲಸ್ಯವು ಹೆಚ್ಚಾಗಿರುವದು. ಯಾಕೆ?

**ಭಾಷೆ:**— ಉತ್ತರ, ಪಶ್ಚಿಮ ಭಾಗಗಳಿಗೆ ಮರಾಠಿ ಭಾಷೆಯ ಪ್ರದೇಶವು ಹೊಂದಿರುವದರಿಂದ ಆ ಭಾಗಗಳಲ್ಲಿ ಮರಾಠಿ ಭಾಷೆಯೂ, ಉಳಿದ ಕಡೆಯಲ್ಲಿ ಕನ್ನಡ ಭಾಷೆಯೂ ನಡೆಯುವವು.

**ಉದ್ಯೋಗ:**— ಒಕ್ಕಲತನವು ಮುಖ್ಯ ಉದ್ಯೋಗವಾಗಿರುವದು. ಕೆಲಕೆಲವು ಕಡೆಗೆ ನೇಯುವ ಕೆಲಸವು ನಡೆಯುವದು.

**ಕಾರಖಾನೆ:**— ಎಕಸಂಬಿಯಲ್ಲಿ ಹತ್ತಿ ಅರೆಯುವ ಗಿರಣಿಯುಂಟು. ನಿಪ್ಪಾಣಿಯಲ್ಲಿ ಬೀಡಿಗಳನ್ನು ಕಟ್ಟುವ ಕಾರಖಾನೆಗಳುಂಟು.

**ಕೈಗಾರಿಕೆ:**— ಚಿಕ್ಕೋಡಿಯಲ್ಲಿ ಹಿತ್ತಾಳಿಯ ಮೂರ್ತಿ, ತಾಮ್ರದ ಗಿಂಡಿ ತಯಾರಾಗುತ್ತವೆ.

**ಉಗೆಬಂಡಿಯ ಮಾರ್ಗ:**— ಈ ಮಾರ್ಗವು ಉತ್ತರದಿಂದ ದಕ್ಷಿಣಕ್ಕೆ ಹೋಗಿರುವದು. ಚಿಕ್ಕೋಡಿ ರೋಡ ಎಂಬ ಸ್ಟೇಶನವುಂಟು.

**ಮುಖ್ಯ ಊರು:**— **ಚಿಕ್ಕೋಡಿ**— ಇದು ತಾಲೂಕಿನ ಮುಖ್ಯ ಸ್ಥಳವಾಗಿರುವದರಿಂದ ತಾಲೂಕ ಕಚೇರಿಗಳಿರುವವು. ಪೋಸ್ಟ ಹಾಗು ತಾರಆಫೀಸು, ಜನರ ಹಾಗು ದನಗಳ ದವಾಖಾನೆ, ಇಂಗ್ಲಿಷ ಶಾಲೆ ಮೊದಲಾದವುಗಳು ಇರು

ತ್ತವೆ. **ಬಟ್ಟೆಗಳೂ, ತಾಮ್ರಹಿತ್ತಾಳಿಯ** ಪಾತ್ರೆಗಳೂ **ತಯಾರಾಗುತ್ತವೆ.** ಸಂತೆಯ ದಿವಸ ಜೋಳದ ವ್ಯಾಪಾರವು ಹೆಚ್ಚಾಗುವದು. **ನಿಪ್ಪಾಣಿ**— ಇಲ್ಲಿ ಮ್ಯನಸಿಪಾಲಟಿ, ಹಾಯಸ್ಕೂಲ್, ಫೌಜದಾರಕಚೇರಿ, ಪೋಸ್ಟ ಆಫೀಸು ಮೊದಲಾದವುಗಳಿರುತ್ತವೆ. ಇದು ತಂಬಾಕ, ಬೆಲ್ಲಗಳ ವ್ಯಾಪಾರದ ಬಗ್ಗೆ ಹೆಸರಾಗಿರುವದಲ್ಲದೆ ಪಡಿಮೂಲೆಯ ಸ್ಥಳವಾಗಿರುವದು. ಸಂತೆಯ ದಿವಸ ದನಗಳ ವ್ಯಾಪಾರವು ಚನ್ನಾಗಿ ಆಗುತ್ತದೆ. ನಿಪ್ಪಾಣಿಕರನವಾಡೆ, ದಸ್ತಗಿರಿಯ ದರ್ಗೆ, ಹೊಸ ಬಸ್ತಿ ಮೊದಲಾದವುಗಳು ನೋಡತಕ್ಕಂಥವುಗಳಿರುತ್ತವೆ. ಇಲ್ಲಿಯ ಕೋಟೆಯು ಭದ್ರವಾಗಿರುವದು. **ಸದಲಗಿ**— ಇಲ್ಲಿ ಫೌಜದಾರ ಕಚೇರಿ ಇರುವದು. ಧಡೋತಿಯ ವಸ್ತ್ರಗಳು ತಯಾರಾಗುತ್ತವೆ. ಸಂತೆಯ ದಿವಸ ವ್ಯಾಪಾರವು ನೆಟ್ಟಗೆ ಆಗುವದು. **ಭೋಜ**— ಇಲ್ಲಿ ಚಲೋ ಸೀರೆಗಳು ತಯಾರಾಗುತ್ತವೆ. ಈ ಊರ ಶಾಲೆಗೆ ಇಂಗ್ಲಿಷ ಕ್ಲಾಸು ಜೋಡಿಸಲ್ಪಟ್ಟಿರುವದು. ಸಂತೆಯ ದಿವಸ ವ್ಯಾಪಾರವು ನೆಟ್ಟಗಾಗುವದು. **ಕೊಂಗನೋಳಿ**— ಇಲ್ಲಿ ಬಟ್ಟೆಗಳು ತಯಾರಾಗುತ್ತವೆ. ಊರ ಶಾಲೆಗೆ ಒಕ್ಕಲತನದ ಕ್ಲಾಸು ಜೋಡಿಸಲ್ಪಟ್ಟಿರುವದು. ಸಂತೆಯ ದಿವಸ ದನಗಳ ಮಾರಾಟವು ಚೆನ್ನಾಗಿ ಆಗುವದು **ಬೇಡಕಿಹಾಳ**— ಇಲ್ಲಿ ಮೆಣಸಿನ ಕಾಯಿಯ ವ್ಯಾಪಾರ ಬಹಳ. ಈ ಊರಲ್ಲಾದರೂ ಶೇತಕಿ ಕ್ಲಾಸು ಇರುವದು. ಸಂತೆಯ ದಿವಸ ಕಾಳಿನ ವ್ಯಾಪಾರವು ಚನ್ನಾಗಿ ಆಗುತ್ತದೆ. **ಅಕ್ಕೋಳ**— ಇಲ್ಲಿಯ ತಂಬಾಕ ಪ್ರಸಿದ್ಧ. **ನಾಗರಾಳ**— ಇದು ಚರ್ಮದ ಜೋಡುಗಳ ಬಗ್ಗೆ ಹೆಸರಾಗಿರುವದು. **ಅಂಕಲಿ**— ಇಲ್ಲಿ ಶಿತೋಳೆಯವರ ವಾಡೆಯು ನೋಡತಕ್ಕಂಥಾದ್ದಿರುತ್ತದೆ. ಊರ ಸಮೀಪದಲ್ಲಿ ಕೃಷ್ಣಾನದಿಗೆ ಪೂಲು ಕಟ್ಟಿರುವರು. **ಎಡೂರ**— ಇದು ಕ್ಷೇತ್ರಸ್ಥಾನವಾಗಿರುವದು. ಇಲ್ಲಿ ವಿರೂಪಾಕ್ಷಲಿಂಗನ ಗುಡಿಯಿರುವದು. ಈ ದೇವರ ಜಾತ್ರೆಯು ಪ್ರತಿ ವರ್ಷ ಚೈತ್ರ ಮಾಸದಲ್ಲಿ ನೆರೆಯುವದು. **ಸ್ತವನಿಧಿ**— ಇದು ಜೈನರ ಕ್ಷೇತ್ರಸ್ಥಾನವು. ಬ್ರಹ್ಮದೇವ, ಕ್ಷೇತ್ರಪಾಲ, ಪಾರ್ಶ್ವನಾಥ ಮೊದಲಾದವರ ಮಂದಿರಗಳಿರುತ್ತವೆ. ಪ್ರತಿ ವರ್ಷ ಪೌಷ್ಯ ಅಮಾವಾಸ್ಯೆಗೆ ಜಾತ್ರೆ ನೆರೆಯುವದು. **ಆಡಿ**— ಊರ ಸಮೀಪದ ಗುಡ್ಡದ ಮೇಲೆ ಮಲ್ಲಿಕಾರ್ಜುನನ ದೇವಾಲಯವುಂಟು. ಶ್ರಾವಣ ಮಾಸದಲ್ಲಿ ಜಾತ್ರೆ ನೆರೆಯುವದು. ಇವುಗಳಲ್ಲದೆ ಎಷ್ಟೋ ಸಣ್ಣ ದೊಡ್ಡ ಊರುಗಳುಂಟು. ( ನಕಾಶೆ ನೋಡಿರಿ. )



ಎಡೂರ ಗುಡಿ.

ವ್ಯಾಪಾರದ ಜಿನಸು:—ತಂಬಾಕ, ಬೆಲ್ಲ, ಮೆಣಸಿನಕಾಯಿ, ಜೋಳ, ಗೋದಿ, ಹತ್ತಿ ಮೊದಲಾದವುಗಳು.

ಪ್ರಶ್ನ:— ೧ ಈ ತಾಲೂಕಿನ ಉತ್ತರ ಭಾಗದಲ್ಲಿ ಮೇಲಾದ ಭೂಮಿ, ಇರುವದು. ಯಾಕೆ? ೨ ನಿಪ್ಪಾಣಿಯಲ್ಲಿ ತಂಬಾಕ, ಬೇಡಕಿಹಾಳದಲ್ಲಿ ಮೆಣಸಿನಕಾಯಿ ಇವುಗಳ ವ್ಯಾಪಾರವು ಹೆಚ್ಚಾಗುವದು. ಯಾಕೆ? ೩ ಯಾವ ಯಾವ ಅನುಕೂಲತೆಗಳ ಮೂಲಕ ತೋಟಗಳ ಸಂಖ್ಯೆಯು ಹೆಚ್ಚಾಗಿರುವದು? ೪ ಅಕ್ಕೋಳ, ನಾಗರಾಳ, ಚಿಕ್ಕೋಡಿ, ಎಡೂರ ಇವು ಯಾತರ ಬಗ್ಗೆ ಹೆಸರಾಗಿವೆ? ೫ ಈ ತಾಲೂಕಿನಲ್ಲಿ ಫೌಜದಾರ ಕಚೇರಿಗಳು ಹೆಚ್ಚಾಗಿರುವವು. ಯಾಕೆ?

# ೨೨ ನೆಯ ಪಾಠ.

## ಹುಕ್ಕೇರಿ ತಾಲೂಕು.




**ಸ್ಥಾನ:—** ಈ ತಾಲೂಕು ಚಿಕ್ಕೋಡಿ ತಾಲೂಕಿನ ದಕ್ಷಿಣಕ್ಕಿರುತ್ತದೆ.

**ಮೇರೆ:—** ಉತ್ತರಕ್ಕೆ— ಚಿಕ್ಕೋಡಿ ತಾಲೂಕು. ಪಶ್ಚಿಮಕ್ಕೆ— ಕರವೀರ ಇಲಾಖೆ. ದಕ್ಷಿಣಕ್ಕೆ— ಬೆಳಗಾಂವ ತಾಲೂಕು, ಸಾಂಗಲಿ-ಕೊಲ್ಹಾಪುರ ಸಂಸ್ಥಾನಗಳ ಭಾಗಗಳು. ಪೂರ್ವಕ್ಕೆ— ಗೋಕಾಕ ತಾಲೂಕು.

**ವಿಸ್ತಾರ:—** ಇದರ ಕ್ಷೇತ್ರವು ೩೪೩ ಚೌರಸ ಮೈಲು.

**ಜನಸಂಖ್ಯೆಯ ಪ್ರಮಾಣ:—** ಚೌರಸ ಮೈಲಿಗೆ ಸರಾಸರಿ ೩೨೧ ಜನರು.

**ಪ್ರಾಕೃತಿಕ ಸ್ವರೂಪ:—** ಉತ್ತರ, ದಕ್ಷಿಣಭಾಗಗಳೊಳಗಿಂದ ಸಹ್ಯಾದ್ರಿಯ ಶಾಖೆಗಳು ಹೋಗಿರುವದರಿಂದ ಭೂಮಿಯು ಉತ್ತರ ದಕ್ಷಿಣ ಬದಿಗಳಿಂದ ಮಧ್ಯಭಾಗದ ಕಡೆಗೆ ಸ್ವಲ್ಪ ಇಳುಕಲಾಗಿರುವದು. ದಕ್ಷಿಣ ಕಡೆಯ ಪ್ರದೇಶವು ಗುಡ್ಡಗಾಡವಾಗಿರುವದು. ಉತ್ತರ ಕಡೆಯ ಪ್ರದೇಶವು ಮೊರಡಿಗಳುಳ್ಳದ್ದಾಗಿರುವದು; ಉಳಿದ ಭಾಗವು ಬೈಲುಪ್ರದೇಶವಾಗಿರುವದು. ಇಲ್ಲಿಯ ನದಿಗಳು ಸಾಮಾನ್ಯವಾಗಿ ಪೂರ್ವಕ್ಕೆ ಹರಿಯುವದರಿಂದ ದಂಡೆಯ ಪ್ರದೇಶವು ಪೂರ್ವದ ಕಡೆಗೆ ಇಳುಕಲಾಗಿರುವದು. ನದಿಗಳ ದಂಡೆಯಲ್ಲಿ ಮೇಲಾದ

ಭೂಮಿ ಇರುವದು. **ಪೂರ್ವ-ದಕ್ಷಿಣ ಭಾಗಗಳಲ್ಲಿ ಕೆಂಪು ಕೂಡಿದ** ಎರೆಭೂಮಿ ಇರುವದು. **ಪಶ್ಚಿಮಕ್ಕೆ ಕೆಂಪುಭೂಮಿ ಇರುವದು.**

**ಹವೆ:**—ಇಲ್ಲಿಯ ಹವೆಯು ಒಣ ಹಾಗು ಸಾಧಾರಣ ಉಷ್ಣವಾಗಿದ್ದು, ದಕ್ಷಿಣಕ್ಕಿಂತ ಉಳಿದ ಕಡೆಯ ಹವೆಯು ಆರೋಗ್ಯಕ್ಕೆ ಹೆಚ್ಚು ಹಿತಕರ ವಾಗಿರುವದು. ಹುಕ್ಕೇರಿರೋಡದ ಹವೆ ಹಾಗು ನೀರು ಉತ್ತಮವಾಗಿರುವದ ರಿಂದ ಡಾಕ್ಟರರು ಬೇನೆಯವರಿಗೆ ಅಲ್ಲಿ ಕೆಲದಿನ ವಾಸಮಾಡಲು ಹೇಳುವರು.

**ಮಳೆ:**—ದಕ್ಷಿಣಭಾಗದಲ್ಲಿ ಗುಡ್ಡ, ಗಿಡಗಂಟಿಗಳಿರುವದರಿಂದ ಮಳೆಯು ಹೆಚ್ಚಾಗುವದು. ಪಶ್ಚಿಮ, ಉತ್ತರ, ಪೂರ್ವಭಾಗಗಳಲ್ಲಿ ಕ್ರಮದಿಂದ ಕಡಿಮೆ ಯಾಗುತ್ತ ಹೋಗುವದು. ಅಂದರೆ ಸರಾಸರಿ ೨೫-೩೦ ಇಂಚು ಮಳೆಯಾ ಗುವದು.

**ಹೊಳೆ, ಹಳ್ಳಗಳು:**—ಹರಣಕಾಶಿ, ಘಟಪ್ರಭೆ ಈ ನದಿಗಳು ಪೂರ್ವದ ಕಡೆಗೆ ಹರಿಯುವವು. ಹರಣಕಾಶಿ, ತಾಮ್ರಪರ್ಣಿ ನದಿಗಳು ಅನು ಕ್ರಮವಾಗಿ ಘೋಡಗೇರಿ, ದಡ್ಡಿಗಳ ಹತ್ತರ ಘಟಪ್ರಭೆಗೆ ಕೂಡುತ್ತವೆ. ಮಾರ್ಕಂಡೆ ನದಿಯು ಆಗ್ನೇಯ ಭಾಗದಲ್ಲಿ ಹರಿದಿರುವದು. ಈ ತಾಲೂಕಿ ನಲ್ಲಿ ಹಲವು ಹಳ್ಳಗಳಿದ್ದು ಅವುಗಳಲ್ಲಿ ಸೊಲ್ಹಾಪುರ, ಹುಕ್ಕೇರಿ ಹಳ್ಳಗಳು ಹೆಸರಾಗಿರುತ್ತವೆ. ಇವುಗಳ ಉಪಯೋಗವಾದರೂ ಚಿಕ್ಕೋಡಿ ತಾಲೂಕಿನ ಹಳ್ಳಗಳಂತಾಗುತ್ತದೆ. ಆದುದರಿಂದ ತೋಟಗಳ ಸಂಖ್ಯೆಯು ಹೆಚ್ಚು. ಹೊಳೆ ಹಳ್ಳಗಳ ದಂಡೆಯ ಪ್ರದೇಶದಲ್ಲಿ ಊರುಗಳು ದಟ್ಟಾಗಿರುತ್ತವೆ.

**ಬೆಳೆ:**—ಮೆಣಸಿನಕಾಯಿ, ಕಬ್ಬು ಇವುಗಳ ಬೆಳೆಯು ವಿಶೇಷವಾಗಿ ರುವದು. ಜೋಳ, ಹತ್ತಿ, ತಂಬಾಕ, ನೆಲಗಡಲೆ ಮೊದಲಾದವುಗಳಾದರೂ ಬೆಳೆಯುವವು. ದಡ್ಡಿ ಕಡೆಯ ಭಾಗದಲ್ಲಿ ಭತ್ತವು ಬೆಳೆಯುವದು.

**ಜನರು:**—ಇವರು ಹಂಚಿನ ಮನೆಗಳಲ್ಲಿ ವಾಸಿಸುವದೇ ವಿಶೇಷ. ಮುಖ್ಯ ಆಹಾರವು ಜೋಳವಾಗಿರುವದು. ದಕ್ಷಿಣಭಾಗದ ಜನರು ಉಳಿದ ಭಾಗದ ಜನರಿಗಿಂತ ಹೆಚ್ಚು ಗಟ್ಟಿಗರಾಗಿರುವರು. ಯಾಕೆ? ಜನರ ಸ್ಥಿತಿಯು ಬಹುತರ ಚಿಕ್ಕೋಡಿತಾಲೂಕಿನ ಜನರ ಸ್ಥಿತಿಯನ್ನು ಹೋಲುವದು.

**ಭಾಷೆ:**—ಕನ್ನಡ ಭಾಷೆಯು ವಿಶೇಷವಾಗಿ ನಡೆಯುವದು. ಪಶ್ಚಿಮ ಭಾಗದಲ್ಲಿ ಮಾತ್ರ ಸ್ವಲ್ಪ ಮರಾಠಿಭಾಷೆಯು ನಡೆಯುವದು. ಯಾಕೆ?

**ಉದ್ಯೋಗ:**—ಒಕ್ಕಲತನವು ಮುಖ್ಯ ಉದ್ಯೋಗವಾಗಿರುವದು. ಕೆಲಕೆಲವು ಕಡೆಗೆ ನೇಯುವ ಕೆಲಸವೂ ನಡೆಯುವದು.

**ಕಾರಖಾನೆ:**—ಘೋಡಗೇರಿಯಲ್ಲಿ ಕಾಜಿನ ಬಳೆಮಾಡುವ ಕಾರಖಾನೆಯೂ, ಹುಕ್ಕೇರಿ, ಪಾಚ್ಛಾಪುರ, ಒಂಟಮೂರಿಗಳಲ್ಲಿ ಊದಿನಕಡ್ಡಿಯ ಕಾರಖಾನೆಗಳೂ ಇರುವವು. ಇತ್ತಿತ್ತಲಾಗಿ ಸಂಕೇಶ್ವರದೊಳಗೆ ಸಕ್ಕರೆಯ ಕಾರಖಾನೆಯುಂಟಾಗಿದೆ.

**ಉಗಿಬಂಡಿಯ ಮಾರ್ಗ:**—ಈ ಮಾರ್ಗವು ಉತ್ತರದಿಂದ ದಕ್ಷಿಣಕ್ಕೆ ಹೋಗಿರುವದು. ಬೆಲ್ಲದಬಾಗೇವಾಡಿ, ಹುಕ್ಕೇರಿರೋಡ, ಪಾಚ್ಛಾಪುರ ಎಂಬ ಸ್ಟೇಶನಗಳುಂಟು.

**ಮುಖ್ಯ ಊರು:**—**ಹುಕ್ಕೇರಿ**—ಇದು ತಾಲೂಕಿನ ಮುಖ್ಯ ಸ್ಥಳವಾಗಿರುವದರಿಂದ ತಾಲೂಕಕಚೇರಿ, ದವಾಖಾನೆ, ಇಂಗ್ಲಿಷಕ್ಲಾಸು, ಪೋಸ್ಟ ಆಫೀಸು, ತಾರಆಫೀಸು ಮೊದಲಾದವುಗಳಿರುತ್ತವೆ. ಇಲ್ಲಿ ಕಾರಂಜಿಗಳು ಪ್ರಸಿದ್ಧ. ಬೆಲ್ಲ, ಮೆಣಸಿನಕಾಯಿಗಳ ವ್ಯಾಪಾರವು ವಿಶೇಷ. **ಸಂಕೇಶ್ವರ**—ಇಲ್ಲಿ ಶ್ರೀಮಜ್ಜಗದ್ಗುರು ಶಂಕರಾಚಾರ್ಯರ ಮಠವಿದ್ದು ಶಂಕರಲಿಂಗನ ದೇವಾಲಯವಿರುತ್ತದೆ. ಈ ದೇವರ ಜಾತ್ರೆಯು ಮಾಘಶುದ್ಧ ೭ ಗೆ ಆಗುವದು. ಬೆಲ್ಲ, ಮೆಣಸಿನಕಾಯಿ, ಹತ್ತಿ ಇವುಗಳ ವ್ಯಾಪಾರವು ಹೆಚ್ಚಾಗುವದು. **ಒಂಟಮೂರಿ**—ಇದು ದೇಸಗತಿಯ ಊರು. ಇಲ್ಲಿಯ ದೇಸಾಯರಿಂದ ಇಂಗ್ಲಿಷ ಶಾಲೆಯು ಸ್ಥಾಪಿಸಲ್ಪಟ್ಟಿರುವದು. ಹೆಸರಾದ ಚರ್ಮದ ಜೋಡುಗಳಾಗುತ್ತವೆ. **ಪಾಚ್ಛಾಪುರ**—ಇಲ್ಲಿ ಫೌಜದಾರ ಕಚೇರಿ ಇರುವದು. ಖಾದಿಬಟ್ಟೆಗಳು ತಯಾರಾಗುತ್ತವೆ. ಕೋಟೆಯ ಸ್ಥಳವಾಗಿರುವದು. ದನಗಳ ವ್ಯಾಪಾರವು ಚನ್ನಾಗಿ ಆಗುವದು. **ಬೆಲ್ಲದಬಾಗೇವಾಡಿ**—ಇಲ್ಲಿ ಬೆಲ್ಲದ ವ್ಯಾಪಾರವು ಹೆಚ್ಚಾಗುವದು. **ನಿಡಸೋಸಿ**—ಇಲ್ಲಿ ಶ್ರೀದುರದುಂಡೀಶ್ವರನ ಮಠವಿರುವದು. ಪ್ರತಿವರ್ಷ ಭಾದ್ರಪದದಲ್ಲಿ ಜಾತ್ರೆ ನೆರೆಯುವದು. **ಅಮ್ಮಣಗಿ**—ಈ ಊರ ಸಮೀಪದಲ್ಲಿ ಶ್ರೀಮಲ್ಲಿಕಾರ್ಜುನ ದೇವಸ್ಥಾನವಿದ್ದು, ಪ್ರತಿವರ್ಷ ಮಕರ ಸಂಕ್ರಮಣದಲ್ಲಿ ಜಾತ್ರೆಯಾಗುವದು. ಜಾತ್ರೆಯ ಜನರಿಗೆಲ್ಲ ಕೆರೆಯ ನೀರಿನ ಪೂರೈಕೆಯಾಗುವದು. **ಲಿಂಗ**—ಒರತಿ ಎಂಬದೊಂದು ತೀರ್ಥವಿರುವದು. **ಘೋಡಗೇರಿ**—ಊರ ಸಮೀಪದ ಗುಡ್ಡದ ಮೇಲೆ ನಿರ್ವಾಣೆಪ್ಪನ ದೇವಸ್ಥಾ

ನವಿದ್ದು ಪ್ರತಿವರ್ಷ ಶ್ರಾವಣಮಾಸದಲ್ಲಿ ಜಾತ್ರೆಯಾಗುವದು. **ದಡ್ಡಿ**— ಈ ಊರ ಸಂತೆಯಲ್ಲಿ ಅಕ್ಕಿಯ ವ್ಯಾಪಾರವು ಚನ್ನಾಗಿ ಆಗುವದು. **ಬಡಕುಂದ್ರಿ**— ಮಾಘಮಾಸದ ಹುಣ್ಣಿವೆಗೆ ಮಹಾಲಕ್ಷ್ಮಿಯ ಜಾತ್ರೆಯಾಗುವದು. ಇವುಗಳಲ್ಲದೆ ಬೇರೆ ಎಷ್ಟೋ ಸಣ್ಣ ದೊಡ್ಡ ಊರುಗಳುಂಟು. ( ನಕಾಶೆ ನೋಡಿರಿ )

**ವ್ಯಾಪಾರದ ಜೀನಸು**:— ಬೆಲ್ಲ, ಮೆಣಸಿನಕಾಯಿ, ಹತ್ತಿ, ತಂಬಾಕ, ಕಾಜಿನ ಬಳೆ, ಊದಿನಕಡ್ಡಿ ಮೊದಲಾದವುಗಳು.

**ಪ್ರಶ್ನ**:—೧ ಈ ತಾಲೂಕಿನ ಪ್ರಾಕೃತಿಕ ಸ್ವರೂಪವನ್ನು ಹೇಳಿರಿ. ೨ ಬೆಲ್ಲದಬಾಗೇವಾಡಿಯಲ್ಲಿ ಬೆಲ್ಲದ ವ್ಯಾಪಾರವೂ, ದಡ್ಡಿಯಲ್ಲಿ ಅಕ್ಕಿಯ ವ್ಯಾಪಾರವೂ ಹೆಚ್ಚಾಗುವದು ಯಾಕೆ? ೩ ಕಾರಖಾನೆಗಳಿರುವ ಊರುಗಳು ಯಾವವು? ೪ ಹುಕ್ಕೇರಿರೋಡದಿಂದ ಬೇರೆ ಕಡೆಗೆ ಹೋಗುವ ಮಹತ್ವದ ಸರಕು ಯಾವದು? ಯಾಕೆ? ೫ ಮಳೆ-ಬೆಳೆಗಳ ಬಗ್ಗೆ ಗೊತ್ತಾದ ಸಂಗತಿ ಹೇಳಿರಿ.

---

# ೨೩ನೆಯ ಪಾಠ.

## ಗೋಕಾಕ ತಾಲೂಕು.



**ಸ್ಥಾನ:**—ಈ ತಾಲೂಕು ಹುಕ್ಕೇರಿ ತಾಲೂಕಿನ **ಪೂರ್ವ**ಕ್ಕಿರುತ್ತದೆ.

**ಮೇರೆ:**—ಉತ್ತರಕ್ಕೆ— ಕೊಲ್ಹಾಪುರ ಸಂಸ್ಥಾನದ ಭಾಗ, ಅಥಣಿ ತಾಲೂಕು, ಸಾಂಗಲಿ, ಮುಧೋಳ ಜಹಾಗೀರುಗಳು. ಪಶ್ಚಿಮಕ್ಕೆ—ಹುಕ್ಕೇರಿ ತಾಲೂಕು, ಕೊಲ್ಹಾಪುರ ಸಂಸ್ಥಾನದ ಭಾಗ. ದಕ್ಷಿಣಕ್ಕೆ—ಬೈಲಹೊಂಗಲ, ಸವದತ್ತಿ ತಾಲೂಕುಗಳು. ಪೂರ್ವಕ್ಕೆ—ಮುಧೋಳ ಜಹಾಗೀರು.

**ವಿಸ್ತಾರ:**—ಇದರ ಕ್ಷೇತ್ರವು ೬೭೧ ಚೌರಸಮೈಲು.

**ಜನಸಂಖ್ಯೆಯು ಪ್ರಮಾಣ:**—ಚೌರಸಮೈಲಿಗೆ ಸರಾಸರಿ ೧೮೪ ಜನರು.

**ಪ್ರಾಕೃತಿಕಸ್ವರೂಪ:**—ಪಶ್ಚಿಮಬದಿಗೆ ಗುಡ್ಡದ ಸಾಲು ಇದ್ದು ಆ ಭಾಗವು ಪೂರ್ವದ ಕಡೆಗೆ ಇಳುಕಲಾಗುತ್ತ ಹೋಗಿರುವದು. ಗುಡ್ಡದ ಸಾಲಿನಲ್ಲಿರುವ ನಾರಾಯಣನ ಗುಡ್ಡವು ಹೆಸರಾಗಿರುತ್ತದೆ. ಉಳಿದಕಡೆಯ ಪ್ರದೇಶವೆಲ್ಲ ಬಹುತರ ಬೈಲು ಭೂಮಿಯಾಗಿರುವದು. ಹಳ್ಳಗಳ ಹರಿಯುವಿಕೆಯು ಮೇಲಿಂದ ವಿಚಾರಿಸಲು ಉತ್ತರಭಾಗದ ಭೂಮಿಯು ದಕ್ಷಿಣಕ್ಕೂ, ದಕ್ಷಿಣಭಾಗದ ಭೂಮಿಯು ಉತ್ತರಕ್ಕೂ ಇಳುಕಲಾಗಿದ್ದು ನಡುವಿನ ತಗ್ಗುಪ್ರದೇಶದೊಳಗಿಂದ ಘಟಪ್ರಭೆಯು ಪೂರ್ವದ ಕಡೆಗೆ ಹರಿಯುತ್ತ ಹೋಗಿರುವದು. ಇದರಿಂದ ಇಲ್ಲಿಯ ಭೂಮಿಯು ಪೂರ್ವದ ಕಡೆಗೆ ಇಳುಕಲಾಗಿರುತ್ತದೆಂದು ಸ್ಪಷ್ಟವಾಗುತ್ತದೆ. ನದಿಯ ದಂಡೆಯಲ್ಲಿ ಮೇಲಾದ ಭೂಮಿಯಿದ್ದು ಪೂರ್ವಭಾಗದಲ್ಲಿ ಬಡನೆಲವಿರುವದು. ಪಶ್ಚಿಮದಲ್ಲಿ ಉಸುಕು ಕೂಡಿದ ಭೂಮಿಯಿರುವದು. ಇಲ್ಲಿ ಎಲ್ಲಕಡೆಗೆ ಬಹುತರ ಕೆಂಪು-ಎರೆ ಭೂಮಿಯು ವಿಶೇಷ.

**ಹವೆ:**—ಇಲ್ಲಿ ಒಣ ಹಾಗು ಉಷ್ಣಹವೆಯಿದ್ದು ಆರೋಗ್ಯಕ್ಕೆ ಹಿತಕರವಾಗಿರುವದು. ಪಶ್ಚಿಮಭಾಗದ ಹವೆಗಿಂತ ಪೂರ್ವಭಾಗದ ಹವೆಯು ಹೆಚ್ಚು ಉಷ್ಣವಾಗಿರುತ್ತದೆ.

**ಮಳೆ:**—ಪಶ್ಚಿಮಬದಿಗೆ ಗುಡ್ಡಗಳಿರುವ ಭಾಗದಲ್ಲಿ ಸಾಧಾರಣ ಮಳೆ ಬೀಳುವದು. ಉಳಿದ ಭಾಗದಲ್ಲೆಲ್ಲ ಮಳೆಯ ಪ್ರಮಾಣವು ಕಡಿಮೆಯಾಗಿರುವದು. ಅಂದರೆ ಸರಾಸರಿ ೨೦-೨೫ ಇಂಚು ಮಳೆಯಾಗುವದು.

**ಹೊಳೆ-ಹಳ್ಳಗಳು:**—ಘಟಪ್ರಭಾನದಿಯು ಪೂರ್ವದ ಕಡೆಗೆ ಹರಿದಿರುವದು. ಇದಕ್ಕೆ ಮಾರ್ಕಂಡೆ ನದಿಯು ಗೋಕಾಕದ ಹತ್ತರ ಕೂಡಿರುವದು.

ಯಾದವಾಡದ ಹಳ್ಳ, ಮಾಲದಿನ್ನಿ ಹಳ್ಳಗಳು ಹೆಸರಾಗಿರುತ್ತವೆ. ಘಟಪ್ರಭಾ ನದಿಗೆ ತಡಸಲು ಇರುವದಲ್ಲದೆ ಕಾಲುವೆಯನ್ನಾದರೂ ತೆಗೆದಿರುವರು.

**ಬೆಳೆ:**—ಜೋಳ, ಹತ್ತಿ, ಸಜ್ಜಿ, ಗೋದಿ, ಕಡಲೆ, ಕುಸುಬೆ ಮೊದಲಾದವುಗಳು ಬೆಳೆಯುತ್ತವೆ.

**ಜನರು:**—ಇವರು ವಿಶೇಷವಾಗಿ ಮಾಳಿಗೆಯ ಮನೆಗಳಲ್ಲಿರುವರು. ಮುಖ್ಯ ಆಹಾರವು ಜೋಳವಾಗಿರುವದು. ಉಷ್ಣ ಹವೆಯಲ್ಲಿರುವ ಮೂಲಕ ಆಲಸ್ಯವುಳ್ಳವರಾಗಿರುವರು.

**ಭಾಷೆ:**—ಕನ್ನಡ ಭಾಷೆಯು ನಡೆಯುವದು.

**ಉದ್ಯೋಗ:**—ಒಕ್ಕಲತನವು ಮುಖ್ಯ ಉದ್ಯೋಗವಾಗಿದ್ದು ಕೆಲಕೆಲವು ಕಡೆಗೆ ನೇಕಾರಿಕೆಯು ನಡೆಯುವದು.

**ಕಾರಖಾನೆ:**—ಗೋಕಾಕ ತಡಸಲಿನ ನೆರೆಯಲ್ಲಿ ನೂಲಿನ ಗಿರಣಿಯಿದ್ದು ಅದು ಆ ತಡಸಲಿನ ನೀರಿನ ಕಸುವಿನಿಂದ ನಡೆಯುವದು. ಗೋಕಾಕದಲ್ಲಿ ಕಟ್ಟಿಗೆಯ ಬಣ್ಣದ ಸಾಮಾನುಗಳೂ, ತಾಮ್ರ ಹಿತ್ತಾಳಿಯ ಪಾತ್ರೆಗಳೂ ಸಿದ್ಧವಾಗುವ ಸಣ್ಣಪುಟ್ಟ ಕಾರಖಾನೆಗಳುಂಟು.

**ಉಗಿಬಂಡಿಯ ಮಾರ್ಗ:**—ಇದು ತಾಲೂಕಿನ ಪಶ್ಚಿಮಬದಿಯಲ್ಲಿ ಉತ್ತರದಿಂದ ದಕ್ಷಿಣಕ್ಕೆ ಹೋಗಿರುವದು. ಗೋಕಾಕರೋಡ ಎಂಬದೊಂದು ಸ್ಟೇಶನವುಂಟು.

**ಮುಖ್ಯ ಊರು:**—**ಗೋಕಾಕ**-ಇದು ತಾಲೂಕಿನ ಮುಖ್ಯಸ್ಥಳವು. ಇಲ್ಲಿ ಮ್ಯುನಿಸಿಪಾಲಿಟಿ, ಹಾಯಸ್ಕೂಲ್, ಜನರ ಹಾಗು ದನಗಳ ದವಾಖಾನೆಗಳುಂಟು. ತಾಲೂಕಕಚೇರಿಗಳೂ, ಪೋಸ್ಟಆಫೀಸೂ ಇರುವವು. ಇಲ್ಲಿಯ ರೇಶಿಮೆಯ ಒಟ್ಟೆ, ಬೋರೆಹಣ್ಣುಗಳೂ, ಡಾಳಿಂಬಗಳೂ ಹೆಸರಾಗಿರುತ್ತವೆ. ಸಂತೆಯ ದಿವಸ ದನಗಳ ವ್ಯಾಪಾರವು ಚನ್ನಾಗಿ ಆಗುವದು. ಪೂರ್ವಕಾಲದ ಎರಡು ಮಸೀದೆಗಳೂ, ಒಂದು ಜೈನರ ಬಸ್ತಿಯೂ ಇರುತ್ತವೆ. ಊರಸುತ್ತಲು ಗೋಡೆಯಿದ್ದು ದಕ್ಷಿಣ-ಪಶ್ಚಿಮಗಳಲ್ಲಿ ಕಂದಕವಿರುವದು. ಊರ ಪೂರ್ವಕ್ಕಿರುವ ಗುಡದ ಮೇಲೆ ಹಾಳು ಕೋಟೆಯಿದ್ದು ಅಲ್ಲಿ ಮೂರು ಗವಿಗಳೂ, ಒಂದು ಗುಡಿಯೂ ಇರುವವು. **ಯಾದವಾಡ**—ಇಲ್ಲಿ ಹೆಸರಾದ ಸುಣ್ಣವು ಸಿದ್ಧ

ವಾಗುವದು. ಸಂತೆಯ ದಿವಸ ವ್ಯಾಪಾರವು ಚೆನ್ನಾಗಿ ಆಗುವದು. **ಕೊಣ್ಣೂರು**–ಇದು ಘಟಪ್ರಭಾನದಿಯ ದಂಡೆಯಲ್ಲಿರುವದು. ಈ ಊರ ಸೀಮೆಯೊಳಗೆ ತಡಸಲಿನ ಹತ್ತರ ಹಲವು ಹಾಳು ಗುಡಿಗಳಿವೆ. ಕೆಂಪಯ್ಯಸ್ವಾಮಿಗಳ ಮಠವಿದೆ. ಇಲ್ಲಿ ಒಕ್ಕಲತನದ ಶಾಲೆಯಿರುವದು **ಅಂಕಲಗಿ**—ಇಲ್ಲಿ ಅಡವಿ-ಅಪ್ಪಸ್ವಾಮಿಗಳ ಮಠವುಂಟು. ಪ್ರತಿವರ್ಷ ಶ್ರಾವಣಮಾಸದಲ್ಲಿ ಜಾತ್ರೆ ನೆರೆಯುವದು. **ಕಲ್ಲೊಳ್ಳಿ**—ಇಲ್ಲಿ ಜೈನರ ಬಸ್ತಿಯಿದ್ದು, ರಟ್ಟರಾಜರು ಬರೆಯಿಸಿದ ಶಿಲಾಲಿಪಿಯುಂಟು. ಹನುಮಂತದೇವರ ಗುಡಿಯು ಹೆಸರಾಗಿರುವದು. **ಕುಲಿಗೋಡ**–ಇಲ್ಲಿ ಫೌಜದಾರಕಚೇರಿಯೂ. ಒಕ್ಕಲತನದ ಶಾಲೆಯೂ ಇರುವವು. ಹನುಮಂತದೇವರ ಗುಡಿಯು ಪ್ರಸಿದ್ಧವಾಗಿರುವದು. **ಅರಭಾವಿ**—ಇಲ್ಲಿ ಒಕ್ಕಲತನದ ಸರಕಾರಿ ಫಾರ್ಮು ಇರುವದು. ಪಶ್ಚಿಮಬದಿಯಲ್ಲಿ ಶ್ರೀದುರದುಂಡೀಶ್ವರನ ಮಠವಿದ್ದು ಪ್ರತಿವರ್ಷ ಶ್ರಾವಣ ಸೋಮವಾರ ಜಾತ್ರೆ ನೆರೆಯುವದು. **ಸಾವಳಗಿ**— ಇಲ್ಲಿ ಶ್ರೀಶಿವಲಿಂಗೇಶ್ವರ ಸ್ವಾಮಿಗಳ ಮಠವಿದ್ದು ಪ್ರತಿವರ್ಷ ಶ್ರಾವಣಸೋಮವಾರ ಜಾತ್ರೆ ನೆರೆಯುವದು. **ಮೂಡಲಗಿ**—ಇದು ದನಗಳ ವ್ಯಾಪಾರದ ಬಗ್ಗೆ ಹೆಸರಾಗಿರುವದು. **ಕೌಜಲಗಿ**—ಇದು ದೇಸಾಯಿಯರ ಊರು. ಇಂಗ್ಲಿಷ ಕ್ಲಾಸು ಇರುವದು. ಇವುಗಳಲ್ಲದೆ ಎಷ್ಟೋ ಸಣ್ಣ ದೊಡ್ಡ ಊರುಗಳುಂಟು. ( ನಕಾಶೆ ನೋಡಿರಿ. )

**ವ್ಯಾಪಾರದ ಜಿನಸು**:—ಜೋಳ, ಹತ್ತಿ, ಗೋದಿ, ಕಡಲೆ, ಬಣ್ಣದ ಸಾಮಾನು, ಪಾತ್ರೆ, ನೂಲು, ನೂಲಿನಬಟ್ಟೆ, ರೇಶಿಮೆಯಬಟ್ಟೆ, **ಬೋರೆಯ** ಹಣ್ಣು, ದಾಳಿಂಬ ಹಣ್ಣು ಮೊದಲಾದವುಗಳು.

**ಪ್ರಶ್ನ**:—೧ ಈ ತಾಲೂಕು ಹವೆ, ಮಳೆ, ಬೆಳೆಗಳ ದೃಷ್ಟಿಯಿಂದ ಯಾವ ತಾಲೂಕಿಗೆ ಹೋಲಿಸಬಹುದು? ಯಾಕೆ? ೨ ಘಟಪ್ರಭೆಯ ತಡಸಲು ಹಾಗು ಕಾಲುವೆಗಳಿಂದಾದ ಉಪಯೋಗವೇನು? ೩ ಗೋಕಾಕ, ಯಾದವಾಡ, ಮೂಡಲಗಿ ಇವು ಯಾತರ ಬಗ್ಗೆ ಹೆಸರಾಗಿವೆ? ೪ ಜಾತ್ರೆ ನೆರೆಯುವ ಸ್ಥಳಗಳು ಯಾವವು? ೫ ನೂಲಿನ ಗಿರಣಿಯ ಮೂಲಕ ಜನರಿಗಾಗುವ ಲಾಭಗಳನ್ನು ಹೇಳಿರಿ.

---

# ೨೪ ನೆಯ ಪಾಠ.

## ಬೆಳಗಾಂವ ತಾಲೂಕು.




**ಸ್ಥಾನ:**— ಈ ತಾಲೂಕು ಹುಕ್ಕೇರಿ ತಾಲೂಕಿನ ದಕ್ಷಿಣಕ್ಕಿರುತ್ತದೆ.

**ಮೇರೆ:**— ಉತ್ತರಕ್ಕೆ—ಕರವೀರ ಇಲಾಖೆ, ಹುಕ್ಕೇರಿ ತಾಲೂಕು. ಪಶ್ಚಿಮಕ್ಕೆ—ಕರವೀರ ಇಲಾಖೆ, ಸಾವಂತವಾಡಿ ಸಂಸ್ಥಾನ. ದಕ್ಷಿಣಕ್ಕೆ ಖಾನಾಪುರ ತಾಲೂಕು. ಪೂರ್ವಕ್ಕೆ ಬೈಲಹೊಂಗಲ ತಾಲೂಕು.

**ವಿಸ್ತಾರ:**— ಇದರ ಕ್ಷೇತ್ರವು ೬೪೪ ಚೌರಸ ಮೈಲು.

**ಜನಸಂಖ್ಯೆಯ ಪ್ರಮಾಣ:**— ಚೌರಸ ಮೈಲಿಗೆ ಸರಾಸರಿ ೨೧೩ ಜನರು.

**ಪ್ರಾಕೃತಿಕ ಸ್ವರೂಪ:**— ಪಶ್ಚಿಮಕ್ಕೆ ಸಹ್ಯ ಪರ್ವತವಿರುವದರಿಂದ ಗುಡ್ಡದ ಸಾಲುಗಳು ಪಸರಿಸಿರುವವು. ಪಶ್ಚಿಮ, ದಕ್ಷಿಣಭಾಗಗಳಲ್ಲಿ ಗುಡ್ಡಗಳು ವಿಶೇಷ. ಆಗ್ನೇಯ ದಿಕ್ಕಿನ ಭಾಗವು ಸಾಧಾರಣ ಸಮನೆಲವುಳ್ಳದ್ದಾಗಿರುವದು. ಪೂರ್ವ ದಕ್ಷಿಣ ದಿಕ್ಕುಗಳಲ್ಲಿ ಎರೆ ಭೂಮಿಯೂ, ಪಶ್ಚಿಮ ಉತ್ತರಗಳಲ್ಲಿ ಕೆಂಪು ಬಡ ಭೂಮಿಯೂ ಇರುವವು. ಇಲ್ಲಿಯ ಭೂಮಿಯು ಈಶಾನ್ಯದ ಕಡೆಗೆ ಇಳುಕಲಾಗಿರುವದು. ಹೊಳೆಗಳ ದಂಡೆಯಲ್ಲಿ ಮೇಲಾದ ಭೂಮಿಯಿರುವದು.

**ಹವೆ:**— ಇಲ್ಲಿಯ ಹವೆ ತಂಪಾಗಿದ್ದು, ತೇವು ಹೆಚ್ಚಾಗಿರುವದರಿಂದ ರೋಗಕರವಾಗಿರುವದು.

**ಮಳೆ:—** ಪಶ್ಚಿಮದಲ್ಲಿ ಸಹ್ಯ ಪರ್ವತವಿದ್ದು, ಅಡವಿಯು ದಟ್ಟಾಗಿರುವದರಿಂದ ಮಳೆಯು ಹೆಚ್ಚಾಗುವದು. ಅಂದರೆ ಸರಾಸರಿ ೫೦–೧೦೦ ಇಂಚು ಮಳೆಯಾಗುವದು.

**ಹೊಳೆ, ಹಳ್ಳಗಳು:—** ಘಟಪ್ರಭಾ, ತಾಮ್ರಪರ್ಣಿ, ಮಾರ್ಕಂಡೇಯ ಈ ನದಿಗಳು ಈಶಾನ್ಯದ ಕಡೆಗೆ ಹರಿದಿರುವವು. ಬಳ್ಳಾರಿ ಹಳ್ಳವು ಉತ್ತರಕ್ಕೆ ಹರಿದು ಮಾರ್ಕಂಡೇಯನದಿಗೆ ಕೂಡುವದು. ಇವುಗಳ ದಂಡೆಯ ಪ್ರದೇಶವು ಬೆಳೆಯುಳ್ಳದ್ದಿರುವದು. ಜನದಟ್ಟಣೆಯು ಹೆಚ್ಚಾಗಿರುವದು.

**ಬೆಳೆ:—** ಪಶ್ಚಿಮ ಭಾಗದಲ್ಲಿ ಭತ್ತ, ರಾಗಿ, ಸಾವಿ, ಕರೇ ಎಳ್ಳು ಮೊದಲಾದವುಗಳು ಬೆಳೆಯುವವು. ಪೂರ್ವಭಾಗದಲ್ಲಿ ಜೋಳ, ಭತ್ತ, ಕಬ್ಬು, ಅಕ್ಕಡಿ ಕಾಳುಗಳು ಬೆಳೆಯುತ್ತವೆ. ಭತ್ತವು ಈ ತಾಲೂಕಿನ ಮುಖ್ಯ ಬೆಳೆಯಾಗಿದ್ದು ಅದು ಪಶ್ಚಿಮಭಾಗದಲ್ಲಿ ವಿಶೇಷವಾಗಿ ಬೆಳೆಯುವದು.

**ಜನರು:—**ಇವರು ಹಂಚಿನ ಮನೆಗಳಲ್ಲಿರುವರು. ಮುಖ್ಯ ಆಹಾರವು ಅಕ್ಕಿಯಾಗಿರುವದು. ತಂಪು ಹವೆಯಲ್ಲಿದ್ದು, ಹಗರು ಆಹಾರ ತೆಗೆದುಕೊಳ್ಳುವದರಿಂದ ಜನರು ಬುದ್ಧಿವಂತರಾಗಿರುವರು. ಇವರು ಅಶಕ್ತರಿದ್ದರೂ ಭೂಮಿಯು ಸಾಧಾರಣ ಬೆಳೆಯುಳ್ಳದ್ದಿರುವದರಿಂದ ಉದ್ಯೋಗಿಗಳಾಗಿರುವರು. ಪಶ್ಚಿಮಭಾಗದ ಜನರು ಗುಡ್ಡಗಳಲ್ಲಿ ತಿರುಗಾಡುತ್ತಿರುವದರಿಂದ ಧೈರ್ಯಶಾಲಿಗಳಾಗಿರುವರು.

**ಭಾಷೆ:—**ಪಶ್ಚಿಮಭಾಗದಲ್ಲಿ ಮರಾಠಿ ಭಾಷೆಯೂ, ಪೂರ್ವಭಾಗದಲ್ಲಿ ಕನ್ನಡ ಭಾಷೆಯೂ ನಡೆಯುವವು.

**ಉದ್ಯೋಗ:—** ಒಕ್ಕಲತನವು ಮುಖ್ಯವಾಗಿದ್ದು, ನೇಕಾರಿಕೆಯಾದರೂ ನಡೆಯುವದು.

**ಕಾರಖಾನೆ:—**ಬೆಳಗಾಂವಿಯಲ್ಲಿ ದೀಪದ ಪೆಟ್ಟಿಗೆಯ ಕಾರಖಾನೆಯುಂಟು. ನೂಲು, ರೇಶಿಮೆಯ ಬಟ್ಟೆಗಳೂ, ಕಟ್ಟಿಗೆಯ ಸಾಮಾನುಗಳೂ ತಯಾರಾಗುತ್ತವೆ. ಭತ್ತ ಒಡೆಯುವ ಯಂತ್ರಗಳಿರುವವಲ್ಲದೆ ಅವಲಕ್ಕಿಯನ್ನು ತಯಾರಿಸುವ ಚಿಕ್ಕಪುಟ್ಟ ಕಾರಖಾನೆಗಳುಂಟು.

**ಉಗೆಬಂಡಿಯ ಮಾರ್ಗ:**—ಇದು ಸಾಧಾರಣವಾಗಿ ಉತ್ತರದಿಂದ ದಕ್ಷಿಣಕ್ಕೆ ಹೋಗಿರುವದು. ಬೆಳಗಾಂವ, ದೇಸೂರ ಸ್ಟೇಶನಗಳುಂಟು.

**ಮುಖ್ಯ ಊರು:**—ಬೆಳಗಾಂವ—ಇದು ತಾಲೂಕಿನ ಹಾಗು ಜಿಲ್ಹೆಯ ಮುಖ್ಯ ಸ್ಥಳವಾಗಿರುವದು. ಇಲ್ಲಿ ಎಲ್ಲ ಬಗೆಯ ಕೋರ್ಟುಕಚೇರಿಗಳೂ ಕಮಿಶನರ ಸಾಹೇಬರ ಆಫೀಸೂ ಇರುವವು; ಮ್ಯುನಸಿಪಾಲಟಿ, ಲೋಕಲ್‌ಬೋರ್ಡ ಆಫೀಸುಗಳೂ, ಹಾಯಸ್ಕೂಲುಗಳೂ, ಜನರ ಹಾಗು ದನಗಳ ದವಾಖಾನೆಗಳೂ. ಪೋಸ್ಟ ಹಾಗು ತಾರಆಫೀಸುಗಳೂ ಇರುವವು. ಹನುಮಂತನ ದೇವಾಲಯವು ಪ್ರಸಿದ್ಧವಾಗಿದ್ದು, ಪ್ರವಾಸಿಕರಿಗೆ ಇಳಕೊಳ್ಳಲು ಅನುಕೂಲವಾಗಿರುವದು. ಹವೆಯು ತಂಪಾಗಿರುವದರಿಂದ ಯುರೋಪಿಯನ್ನರ ವಸತಿಯು ಹೆಚ್ಚಾಗಿರುವದು. ಇಲ್ಲಿ ನೆಲಕೋಟೆಯಿದ್ದು, ಅದರ ಸುತ್ತಲು ಕಂದಕವಿರುವದು.



**ಬೆಳಗಾಂವಿಯ ಕೋಟೆ.**

**ಕೋಟೆಯಲ್ಲಿ** ಜೈನರ ಬಸ್ತಿಗಳೂ, ಮುಸಲ್ಮಾನರ ಅಸದ್‌ಖಾನನ ದರ್ಗೆಯೂ, ಮಹಾರಾಷ್ಟ್ರರ ದುರ್ಗಾದೇವಿಯ ಗುಡಿಯೂ ಇರುವವು. ಊರ ಪಶ್ಚಿಮ ಬದಿಯಲ್ಲಿ ದಂಡಿನ ಪಾಳಯವಿದ್ದು, ಅದರಲ್ಲಿ ಹಿಂದು, ಮುಸಲ್ಮಾನ, ಯುರೋಪಿಯನ್ ದಂಡಾಳುಗಳಿರುವವು. ಸ್ಟೇಶನವು ಸಮೀಪದಲ್ಲಿದ್ದು, ಮಾರ್ಗಗಳ ಅನುಕೂಲತೆಯು ಚನ್ನಾಗಿರುವದರಿಂದ ಎಲ್ಲ ಬಗೆಯ ವ್ಯಾಪಾರವು ಹೆಚ್ಚಾಗಿ ನಡೆಯುವದು. ದೀಪದ ಪೆಟ್ಟಿಗೆಯ ಕಾರಖಾನೆಯೂ, ಕಟ್ಟಿಗೆ ಸಾಮಾನುಗಳ ಚಿಕ್ಕಪುಟ್ಟ ಕಾರಖಾನೆಗಳೂ ಇರುವವು. ನೂಲು, ರೇಶಿಮೆಗಳ ಬಟ್ಟೆಗಳು ಸಿದ್ಧವಾಗುವವು.

**ಚಂದಗಡ:**— ಇದು ಮಹಾಲಿನ ಸ್ಥಳವು. ಇಲ್ಲಿ ಮಹಾಲಕಚೇರಿ, ಫೌಜದಾರ ಕಚೇರಿ, ದವಾಖಾನೆ, ಪೋಸ್ಟ ಆಫೀಸು ಮೊದಲಾದವುಗಳಿರುತ್ತವೆ. ರವಳನಾಥನ ದೇವಾಲಯವೂ, ಗಢಿ ಎಂಬ ಹೆಸರಿನ ಹಾಳು ಕೋಟೆಯೂ ಇರುತ್ತವೆ. ಈ ಊರ ಚರ್ಮದ ಜೋಡು ( ಮೆಟ್ಟು ) ಹೆಸರಾಗಿರುತ್ತವೆ. **ಬಾಗೇವಾಡಿ**— ಈ ಊರ ಸಂತೆಯಲ್ಲಿ ಕಾಳು-ಕಡಿ, ದನಗಳ ವ್ಯಾಪಾರವು ಚನ್ನಾಗಿ ಆಗುವದು. ಪೋಸ್ಟ ಆಫೀಸು ಇರುವದು. **ತುರ್ಕೇವಾಡಿ** ಹಾಗು **ಕೋವಾಡ**— ಈ ಊರುಗಳಲ್ಲಿ ಮೆಣಸಿನಕಾಯಿ, ಬೆಣ್ಣೆ ಇವುಗಳ ವ್ಯಾಪಾರವು ಚನ್ನಾಗಿ ಆಗುವದು. **ಹೇರೆ**— ಇದು ಸಂಸ್ಥಾನವು. ಇವುಗಳಲ್ಲದೆ ಬೇರೆ ಕೆಲವು ಊರುಗಳಿರುತ್ತವೆ. ( ನಕಾಶೆ ನೋಡಿರಿ. )

**ವ್ಯಾಪಾರದ ಜೀನಸು:**—ಅಕ್ಕಿ, ಜೋಳ, ಕಟ್ಟಿಗೆ, ನೂಲು-ರೇಶಿಮೆಗಳ ಬಟ್ಟೆ, ಬೆಲ್ಲ, ಬಣ್ಣದಸಾಮಾನು, ಬೆಣ್ಣೆ ಮೊದಲಾದವುಗಳು.

**ಪ್ರಶ್ನ**—೧ ಈ ತಾಲೂಕಿನಲ್ಲಿ ಮಳೆಯು ಹೆಚ್ಚಾಗುವದು. ಯಾಕೆ? ೨ ಮುಖ್ಯ ಬೆಳೆಯು ಯಾವದು? ೩ ಬೆಳಗಾಂವಿಯಲ್ಲಿ ಯುರೋಪಿಯನ್ನರ ವಸತಿಯು ಹೆಚ್ಚಾಗಿರುವದು. ಯಾಕೆ? ೪ ಈ ತಾಲೂಕಿನ ಜನರ ಸ್ಥಿತಿ ಹೇಳಿರಿ. ೫ ಬೆಳಗಾಂವಿಯ ವ್ಯಾಪಾರದ ಬೆಳವಣಿಗೆಗೆ ಅನುಕೂಲ ಕಾರಣಗಳು ಯಾವವು?

---

# ೨೫ ನೆಯ ಪಾಠ.

## ಖಾನಪುರ ತಾಲೂಕು.




**ಸ್ಥಾನ:**—ಈ ತಾಲೂಕು ಬೆಳಗಾಂವ ತಾಲೂಕಿನ ದಕ್ಷಿಣಕ್ಕಿರುತ್ತದೆ.

**ಮೇರೆ:**—ಉತ್ತರಕ್ಕೆ—ಬೆಳಗಾಂವ ತಾಲೂಕು, ಪಶ್ಚಿಮಕ್ಕೆ—ಸಾವಂತವಾಡಿ ಸಂಸ್ಥಾನ. ದಕ್ಷಿಣಕ್ಕೆ—ಕಾರವಾರ ಜಿಲ್ಹೆ. ಪೂರ್ವಕ್ಕೆ—ಬೈಲಹೊಂಗಲ ತಾಲೂಕು.

**ವಿಸ್ತಾರ:**—ಇದರ ಕ್ಷೇತ್ರವು ೬೩೩ ಚೌರಸ ಮೈಲು.

**ಜನಸಂಖ್ಯೆಯ ಪ್ರಮಾಣ:**—ಚೌರಸ ಮೈಲಿಗೆ ಸರಾಸರಿ ೧೧೪ ಜನರು.

**ಪ್ರಾಕೃತಿಕ ಸ್ವರೂಪ:**—ಪಶ್ಚಿಮ ಭಾಗದಲ್ಲಿ ಸಹ್ಯಪರ್ವತವಿದ್ದು ನೈಋತ್ಯ ಮೂಲೆಯಲ್ಲಿಯೂ, ದಕ್ಷಿಣ ಭಾಗದಲ್ಲಿಯೂ ಗುಡ್ಡಗಳು ವಿಸ್ತಾರವಾಗಿ ಹಬ್ಬಿಕೊಂಡಿವೆ. ಜಾಂಬೋಟಿಯ ಬಳಿಯಲ್ಲಿರುವ ಗುಡ್ಡಗಳು ಎತ್ತರವಾಗಿರುವವು. ಇಲ್ಲಿಯ ಭೂಮಿಯು ಪೂರ್ವಕ್ಕೆ ಇಳುಕಲಾಗಿರುವದು. ಹೊಳೆಯ ದಂಡೆಯಲ್ಲಿ ಮೇಲಾದ ಭೂಮಿಯಿರುವದು. ಪೂರ್ವ ಭಾಗದಲ್ಲಿ ಮಾತ್ರ ಸ್ವಲ್ಪ ಎರೆ ಭೂಮಿಯಿದ್ದು, ಉಳಿದ ಕಡೆಯಲ್ಲೆಲ್ಲ ಕೆಂಪು ಭೂಮಿಯಿರುವದು.

**ಹವೆ:**—ಇಲ್ಲಿಯ ಹವೆಯು ತಂಪಾಗಿದ್ದು ತೇವು ಹೆಚ್ಚಾಗಿರುವದರಿಂದ ರೋಗಕರವಾಗಿರುವದು.

**ಮಳೆ:**—ಪಶ್ಚಿಮದಲ್ಲಿ ಸಹ್ಯ ಪರ್ವತವಿದ್ದು, ಅಡವಿಯು ದಟ್ಟಾಗಿರುವದರಿಂದ ಮಳೆಯು ಹೆಚ್ಚಾಗುವದು. ಅಂದರೆ ಸರಾಸರಿ ೫೦-೭೫ ಇಂಚು ಮಳೆಯಾಗುವದು.

**ಹೊಳೆಹಳ್ಳ:**—ಮಲಪ್ರಭಾ ಎಂಬದೊಂದು ಹೊಳೆಯಿರುವದು. ತಟ್ಟೀಹಳ್ಳ, ಕುಂಬಾರಹಳ್ಳ ಮೊದಲಾದ ಹಳ್ಳಗಳುಂಟು.

**ಬೆಳೆ:**—ಪಶ್ಚಿಮ ಭಾಗದಲ್ಲಿ ಭತ್ತ, ರಾಗಿ ಮೊದಲಾದವುಗಳು ಬೆಳೆಯುವವು. ಪೂರ್ವಭಾಗದಲ್ಲಿ ಜೋಳ, ಅಕ್ಕಡಿಕಾಳು ಮೊದಲಾದವುಗಳು ಬೆಳೆಯುವವು. ಭತ್ತವು ಈ ತಾಲೂಕಿನ ಮುಖ್ಯ ಬೆಳೆಯಾಗಿರುವದು. ಅಡವಿಯಲ್ಲಿ ಇಮಾರತಿಯ ಕಟ್ಟಿಗೆಗಳು ದೊರೆಯುತ್ತವೆ.

**ಜನರು:**—ಈ ತಾಲೂಕಿನ ಜನರ ಸ್ಥಿತಿಯು ಬಹುತರ ಬೆಳಗಾಂವ ತಾಲೂಕಿನ ಜನರಂತಿರುವದು. ಅವರ ಮುಖ್ಯ ಆಹಾರವು ಅಕ್ಕಿಯಾಗಿರುವದು ಬೆಳಗಾಂವ ತಾಲೂಕಿನವರಂತೆ ಬುದ್ಧಿವಂತರೂ, ಉದ್ಯೋಗಿಗಳೂ, ಸಾಧಾರಣ ಅಶಕ್ತರೂ ಆಗಿರುವರು.

**ಭಾಷೆ:**—ಪಶ್ಚಿಮಭಾಗದಲ್ಲಿ ಮರಾಠಿ, ಪೂರ್ವಭಾಗದಲ್ಲಿ ಕನ್ನಡ ಭಾಷೆಗಳು ನಡೆಯುವವು;

**ಉದ್ಯೋಗ:**—ಒಕ್ಕಲತನವು ಮುಖ್ಯ ಉದ್ಯೋಗವಾಗಿರುವದು.

**ಕಾರಖಾನೆ:**—ಖಾನಾಪುರದಲ್ಲಿ ಹಂಚು ಹಾಗು ಮಣ್ಣಿನ ಪಾತ್ರೆ ಇವುಗಳ ಕಾರಖಾನೆಗಳುಂಟು.

**ಉಗೆಬಂಡಿಯ ಮಾರ್ಗ:**—ಇದು ಉತ್ತರದಿಂದ ದಕ್ಷಿಣದ ಕಡೆಗೆ ಹೊರಟು ಲೋಂಡಾದ ಬಳಿಯಲ್ಲಿ ಟಿಸಿಲುಗಳೊಡೆದು ಒಂದು ಪೂರ್ವದ ಕಡೆಗೂ ಮತ್ತೊಂದು ಪಶ್ಚಿಮದ ಕಡೆಗೂ ಹೋಗಿರುವವು. ಖಾನಾಪುರ, ಗುಂಜಿ, ಲೋಂಡಾ, ನಾಗರಗಾಳಿ ಸ್ಟೇಶನಗಳುಂಟು.

**ಮುಖ್ಯ ಊರು:—ಖಾನಾಪುರ**—ಇದು ತಾಲೂಕಿನ ಮುಖ್ಯ ಸ್ಥಳವಾಗಿರುವದು. ಇಲ್ಲಿ ತಾಲೂಕಕಚೇರಿ, ದವಾಖಾನೆ, ಪೋಸ್ಟಆಫೀಸು, ಇಂಗ್ಲಿಷಕ್ಲಾಸು ಮೊದಲಾದವುಗಳಿರುವವು. ಚುರುಮರಿ, ಅವಲಕ್ಕಿ, ಮಣ್ಣಿನ

ಪಾತ್ರೆ ( ಗಡಿಗೆ ) ಪ್ರಸಿದ್ಧ. ಅಕ್ಕಿ, ಬಾಳೇಹಣ್ಣುಗಳ ವ್ಯಾಪಾರವಾಗುವದು. **ನಂದಗಡ**—ಇದು ಚುರಮರಿಯ ವ್ಯಾಪಾರದ ಬಗ್ಗೆ ಹೆಸರಾಗಿರುವದು. ತೆಂಗು, ಅಡಿಕೆ ಮೊದಲಾದ ಕೊಂಕಣ ಸರಕುಗಳ ವ್ಯಾಪಾರವು ಚನ್ನಾಗಿ ಆಗುವದು. ಯಾಕೆ? **ಹಲಸಗಿ**—ಇದು ವೈಷ್ಣವರ ಪವಿತ್ರವಾದ ಕ್ಷೇತ್ರ ಸ್ಥಾನವು. ಶ್ರೀನರಸಿಂಹ ದೇವರ ದೇವಾಲಯುವುಂಟು. ಆಶ್ವೀನ ಶುದ್ಧ ಹುಣ್ಣಿವೆಗೆ ಜಾತ್ರೆಯಾಗುವದು. **ಬೀಡಿ**—ಇದು ತಾಲೂಕಿನ ಮೊದಲಿನ ಮುಖ್ಯ ಗ್ರಾಮವು. ಸಂಗೊಳ್ಳಿ ರಾಯಪ್ಪನು ಈ ಊರ ಕಚೇರಿ ಸುಟ್ಟಿದ್ದನು. ತೆಂಗು, ಬಾಳೆ, ಎಣ್ಣೆ ಮೊದಲಾದವುಗಳ ವ್ಯಾಪಾರವು ತಕ್ಕಮಟ್ಟಿಗೆ ನಡೆಯುವದು. **ಜಾಂಬೋಟಿ**—ಇದು ದೇಸಾಯಿಯರ ಊರು. ಸುತ್ತಮುತ್ತಲು ಅಡವಿಯು ವಿಶೇಷ. **ಲಿಂಗನಮಠ**—ಇಲ್ಲಿ ಕಟ್ಟಿಗೆಯ ಡಿಪೋ ಉಂಟು. **ಅಸೋಗಿ**—ಇಲ್ಲಿ ಶ್ರೀಶಂಕರರ ದೇವಾಲಯುವುಂಟು. **ಹಂಡಿಬಡಗನಾಥ**—ಇದು ಕ್ಷೇತ್ರಸ್ಥಾನವು. ಹಂಡಿಬಡಗನಾಥ ಎಂಬ ಸಾಧುವಿನ ಸಮಾಧಿಯುಂಟು. **ಲೋಂಡಾ**— ಇದು ಉಗೆಬಂಡಿಯ ಜಂಕ್ಸನ್ ಸ್ಥಳವು. ಇವುಗಳಲ್ಲದೆ ಬೇರೆ ಕೆಲವು ಊರುಗಳಿರುತ್ತವೆ. ( ನಕಾಶೆ ನೋಡಿರಿ. )

**ವ್ಯಾಪಾರದ ಜೀನಸು:**—ಇಮಾರತಿಯ ಕಟ್ಟಿಗೆ, ಚುರಮರಿ, ಭತ್ತ, ಮಣ್ಣಿನ ಪಾತ್ರೆ ಮೊದಲಾದವುಗಳು.

**ಪ್ರಶ್ನೆ:**—೧ ಈ ತಾಲೂಕಿನ ಪ್ರಾಕೃತಿಕಸ್ವರೂಪ ಹೇಳಿರಿ. ೨ ಈ ತಾಲೂಕಿನ ಜನರ ಸ್ಥಿತಿಯು ಬೆಳಗಾಂವ ತಾಲೂಕಿನ ಜನರ ಸ್ಥಿತಿಗೆ ಹೋಲುವದು. ಯಾಕೆ? ೩ ನಂದಗಡದಲ್ಲಿ ಕೊಂಕಣ ಸರಕುಗಳ ವ್ಯಾಪಾರವಾಗುವದು. ಯಾಕೆ? ೪ ಹಲಸಗಿ, ಲೋಂಡಾ, ಲಿಂಗನಮಠ ಇವುಗಳ ಬಗ್ಗೆ ಗೊತ್ತಾದ ಸಂಗತಿ ಹೇಳಿರಿ. ೫ ಪಶ್ಚಿಮಭಾಗದಲ್ಲಿ ಮರಾಠಿ, ಪೂರ್ವಭಾಗದಲ್ಲಿ ಕನ್ನಡ ಭಾಷೆಗಳು ನಡೆಯುವವು. ಯಾಕೆ ?

# ೨೭ನೆಯ ಪಾಠ.

## ಬೈಲಹೊಂಗಲ ತಾಲೂಕು.




**ಸ್ಥಾನ:**— ಈ ತಾಲೂಕು ಬೆಳಗಾಂವ, ಖಾನಾಪುರ ತಾಲೂಕುಗಳ ಪೂರ್ವಕ್ಕಿರುತ್ತದೆ.

**ಮೇರೆ:**— ಉತ್ತರಕ್ಕೆ-ಗೋಕಾಕ ತಾಲೂಕು. ಪಶ್ಚಿಮಕ್ಕೆ-ಬೆಳಗಾಂವ, ಖಾನಾಪುರ ತಾಲೂಕುಗಳು. ದಕ್ಷಿಣಕ್ಕೆ—ಧಾರವಾಡ ಜಿಲ್ಹೆ. ಪೂರ್ವಕ್ಕೆ—ಸವದತ್ತಿ ತಾಲೂಕು.

**ವಿಸ್ತಾರ:**—ಇದರ ಕ್ಷೇತ್ರವು ೪೦೯ ಚೌರಸ ಮೈಲು.

**ಜನಸಂಖ್ಯೆಯ ಪ್ರಮಾಣ:**— ಚೌರಸ ಮೈಲಿಗೆ ಸರಾಸರಿ ೨೮೮ ಜನರು.

**ಪ್ರಾಕೃತಿಕ ಸ್ವರೂಪ:**— ದಕ್ಷಿಣೋತ್ತರಗಳಲ್ಲಿ ಸ್ವಲ್ಪ ಗುಡ್ಡಗಳಿದ್ದು, ಪಶ್ಚಿಮ ದಿಕ್ಕಿನಲ್ಲಿ ಸಣ್ಣ ಸಣ್ಣ ಮೊರಡಿಗಳಿರುತ್ತವೆ. ಉಳಿದ ಪ್ರದೇಶವು ಪೂರ್ವದ ಕಡೆಗೆ ಇಳುಕಲಾಗಿದ್ದು, ಸಮನೆಲವಾಗಿರುತ್ತದೆ. ಇಲ್ಲಿಯ ನದಿಯಿಂದ ಎರಡು ಭಾಗಗಳಾಗಿದ್ದು ಅವೆರಡೂ ನದಿಯ ಕಡೆಗೆ ಇಳುಕಲಾಗಿರುತ್ತವೆ.

ಗುಡ್ಡಗಳಿದ್ದಲ್ಲಿ ಮಾತ್ರ ಕೆಂಪು ಭೂಮಿ ಇರುವದು. ಉಳಿದ ಕಡೆಯಲ್ಲಿ ಎರೆ ಭೂಮಿಯಿರುವದು. ಹೊಳೆಯ ದಂಡೆಯಲ್ಲಿ ಮೇಲಾದ ಭೂಮಿಯಿರುವದು.

**ಹವೆ:**— ಇಲ್ಲಿಯ ಹವೆಯು ಸಾಧಾರಣ ಉಷ್ಣವಾಗಿದ್ದು, ಆರೋಗ್ಯಕ್ಕೆ ತಕ್ಕಮಟ್ಟಿಗೆ ಹಿತಕರವಾಗಿರುವದು.

**ಮಳೆ:**— ಇಲ್ಲಿ ಮಳೆಯು ಸಾಧಾರಣ. ಅಂದರೆ ಸರಾಸರಿ ೨೫-೩೦ ಇಂಚು.

**ಹೊಳೆ-ಹಳ್ಳಗಳು:**— ಮಲಪ್ರಭಾನದಿಯು ಪೂರ್ವದ ಕಡೆಗೆ ಹರಿದಿರುವದು. ತಿಗಡೀಹಳ್ಳ, ದೊಡ್ಡಹಳ್ಳ ಇವು ಹೆಸರಾಗಿರುವವು. ಇವುಗಳ ದಂಡೆಯ ಪ್ರದೇಶವು ಬೆಳೆಯುಳ್ಳದ್ದಿರುವದರಿಂದ ಜನದಟ್ಟಣೆಯು ಹೆಚ್ಚಾಗಿರುವದು.

**ಕೆರೆ:**— ಮುಗಟಖಾನಹುಬ್ಬಳ್ಳಿಯ ಹತ್ತರ ಕೆರೆ ಇರುವದು. ಅದಕ್ಕೆ 'ಗದ್ದಿಕೆರೆ' ಎಂದೆನ್ನುವರು. ಈ ಕೆರೆಯ ನೀರು ಸುಮಾರು ೬೮೦ ಎಕರೆ ಭೂಮಿಗೆ ಸಾಕಷ್ಟಿರುವದು. ಆದ:ದರಿಂದ ಒಕ್ಕಲತನಕ್ಕೆ ಅನುಕೂಲತೆಯುಂಟಾಗಿದೆ.

**ಬೆಳೆ:**— ಜೋಳ, ಗೋದಿ, ಹತ್ತಿ, ಕಡಲೆ, ಕುಸುಬೆ ಮೊದಲಾದವುಗಳು ಬೆಳೆಯುವವು. ಕಿತ್ತೂರ ಕಡೆಯ ಭಾಗದಲ್ಲಿ ಭತ್ತವು ಬೆಳೆಯುವದು.

**ಜನರು:**— ಈ ತಾಲೂಕಿನ ಜನರ ಸ್ಥಿತಿಯು ಚಿಕ್ಕೋಡಿ ತಾಲೂಕಿನ ಜನರ ಸ್ಥಿತಿಗೆ ಹೋಲುವದು. ಇವರ ಮುಖ್ಯ ಆಹಾರವು ಜೋಳ. ದಕ್ಷಿಣೋತ್ತರ ಭಾಗಗಳಲ್ಲಿಯ ಜನರು ಹೆಚ್ಚಿಗೆ ಗಟ್ಟಿಗರಾಗಿರುವರು. ಪೂರ್ವಭಾಗದ ಜನರು ಸ್ವಲ್ಪ ಆಲಸ್ಯವುಳ್ಳವರು. ಯಾಕೆ?

**ಭಾಷೆ:**— ಕನ್ನಡ ಭಾಷೆಯು ನಡೆಯುವದು.

**ಉದ್ಯೋಗ:**— ಒಕ್ಕಲತನವು ಮುಖ್ಯವಾಗಿರುವದು. ನೇಯುವ ಕೆಲಸವಾದರೂ ನಡಿಯುವದು.

**ಕಾರಖಾನೆ:**— ಬೈಲಹೊಂಗಲದಲ್ಲಿ ಹತ್ತಿಯನ್ನು ಅರೆಯುವ ಹಾಗು ಅರಳೆಯ ಗಂಟು ಕಟ್ಟುವ ಗಿರಣಿಗಳುಂಟು.

**ಮುಖ್ಯ ಊರು:— ಬೈಲಹೊಂಗಲ**—ಇದು ತಾಲೂಕಿನ ಮುಖ್ಯ ಸ್ಥಳವಾಗಿರುವದರಿಂದ ತಾಲೂಕ ಕಚೇರಿ, ಇಂಗ್ಲಿಷಶಾಲೆ, ಪೋಸ್ಟ್ಆಫೀಸು, ಮ್ಯುನಿಸಿಪಾಲಿಟಿ ಇರುವವು. ನೂಲು-ರೇಶಿಮೆಯ ಬಟ್ಟೆಗಳು ಸಿದ್ಧವಾಗುವವು. ಸಂತೆ ಶುಕ್ರವಾರ. ಆ ದಿವಸ ದನಗಳ ವ್ಯಾಪಾರವು ಚನ್ನಾಗಿ ಆಗುವದು. **ಕಿತ್ತೂರ**—ಇದು ಇತಿಹಾಸಪ್ರಸಿದ್ಧ ಸ್ಥಳವು. ಇಲ್ಲಿಯ ನೆಲಕೋಟೆಯು ಹಾಳಾಗಿದ್ದು, ಸುತ್ತಲು ಜೋಡು ಕಂದಕಗಳಿರುತ್ತವೆ. ಬಸವೇಶ್ವರನ ದೇವಾಲಯವುಂಟು. ಫೌಜದಾರ ಕಚೇರಿ ಪೋಸ್ಟ್, ತಾರಆಫೀಸು ಒಕ್ಕಲತನದ ಶಾಲೆ ಇರುತ್ತವೆ. ಕೋಟು, ಶರಟುಗಳ ಉತ್ತಮ ಚೀಟು ತಯಾರಾಗುತ್ತದೆ ಕಾಜಿನ ಬಳೆಗಳು ಸಿದ್ಧವಾಗುವವು. ಸಂತೆಯ ದಿವಸ ಬಟ್ಟೆಗಳ ವ್ಯಾಪಾರವು ಚನ್ನಾಗಿ ಆಗುವದು. **ಬೆಳವಡಿ**—ಇಲ್ಲಿಯ ವೀರಭದ್ರದೇವರ ಮೂರ್ತಿಯು ಭವ್ಯವಾಗಿರುವದು. ಇದು ಕಿತ್ತೂರ ದೇಸಾಯಿಯರ ಕುಲದೈವತವು. ಜಾತ್ರೆಯು ಚೈತ್ರಮಾಸದಲ್ಲಾಗುವದು. **ಮುಗುಟಖಾನಹುಬ್ಬಳ್ಳಿ**—ಇದು ಮಲಪ್ರಭಾ ನದಿಯ ದಂಡೆಯ ಮೇಲಿರುವ ಊರು. ವಿಜಾಪೂರ ಬಾದಶಹನ ಸರದಾರನಾದ ಮುಗುಟಖಾನನ ಗೋರಿ ಇರುವದು. ಶ್ರೀನರಸಿಂಹ ದೇವಸ್ಥಾನವಿರುವದು. ಈ ದೇವರ ಜಾತ್ರೆಯು ಪ್ರತಿವರ್ಷ ವೈಶಾಖ ಪೌರ್ಣಿಮೆಗೆ ಆಗುವದು. ಒಕ್ಕಲತನದ ಶಾಲೆಯಿರುವದು. **ದೇಶನೂರು:**—ಇಲ್ಲಿ ಬಣ್ಣದ ಹಾಗು ಕಲ್ಲಿನ ಸಾಮಾನುಗಳು ಸಿದ್ಧವಾಗುತ್ತವೆ. **ಸಂಪಗಾಂವ**--ಇದು ಐತಿಹಾಸಿಕ ಸ್ಥಳವು. ಸಂತೆಯ ದಿವಸ ವ್ಯಾಪಾರವು ಚನ್ನಾಗಿ ಆಗುವದು. ಇಂಗ್ಲಿಷ ಕ್ಲಾಸು, ಪೋಸ್ಟ ಆಫೀಸು ಇರುವವು. ಹಳೆಯದೊಂದು ಮಸೀದೆಯುಂಟು. ಧಡೋತಿಯ ಬಟ್ಟೆಗಳು ಸಿದ್ಧವಾಗುವವು. **ನೇಸರಗಿ**—ಇಲ್ಲಿ ಉರುಟು ಬಟ್ಟೆ ಹಾಗು ಕಾಜಿನ ಬಳೆಗಳು ಸಿದವ್ಧಾಗುತ್ತವೆ. ಬಸವನಗುಡಿ ಇರುವದು. ಸಂತೆಯ ದಿವಸ ವ್ಯಾಪಾರವು ತಕ್ಕಮಟ್ಟಿಗೆ ಆಗುವದು. ಇಲ್ಲಿ ಒಕ್ಕಲತನದ ಶಾಲೆಯಿರುವದು. **ಒಕ್ಕುಂದ**—ಇಲ್ಲಿ ಸುಂದರವಾದ ಕಲ್ಲಿನ ಸಾಮಾನುಗಳು ಸಿದ್ಧವಾಗುತ್ತವೆ. **ಗೋವನಕೊಪ್ಪ**—ಇಲ್ಲಿ ರೇಶಿಮೆಯ ಧೋತರ, ಸೀರೆ, ಖಣ ಮೊದಲಾದವುಗಳು ಸಿದ್ಧವಾಗುವವು. ಇವುಗಳಲ್ಲದೆ ಬೇರೆ ಕೆಲವು ಊರುಗಳುಂಟು. ( ನಕಾಶೆ ನೋಡಿರಿ. )

**ವ್ಯಾಪಾರದ ಜಿನಸು:**—ಜೋಳ, ಗೋದಿ, ಹತ್ತಿ, ಕಡಲೆ, ಕುಸುಬೆ, ನೂಲು ರೇಶಿಮೆ ಒಟ್ಟೆ, ಕಾಜಿನಬಳೆ, ಕಲ್ಲಿನ ಒಡವೆ ಮೊದಲಾದವುಗಳು.

**ಪ್ರಶ್ನ:**—೧ ಈ ತಾಲೂಕಿನಲ್ಲಿ ಎರಡು ಭಾಗಗಳಾಗುವ ಕಾರಣವೇನು? ೨ ಇಲ್ಲಿಯ ಜನರ ಸ್ಥಿತಿಯು ಯಾವ ತಾಲೂಕಿನ ಜನರ ಸ್ಥಿತಿಗೆ ಹೋಲುವದು ? ಯಾಕೆ ? ೩ ನೇಯುವ ಕೆಲಸ ನಡೆಯುವ ಊರುಗಳು ಯಾವವು ? ೪ ಕಿತ್ತೂರ, ಮುಗುಟಖಾನಹುಬ್ಬಳ್ಳಿ, ಗೋವನಕೊಪ್ಪ ಇವು ಯಾತರ ಬಗ್ಗೆ ಹೆಸರಾಗಿವೆ ? ೫ ಬೈಲಹೊಂಗಲದಲ್ಲಿ ಹತ್ತಿಯ ವ್ಯಾಪಾರವು ವಿಶೇಷವಾಗುವದು. ಯಾಕೆ ?

---

## ೨೭ ನೆಯ ಪಾಠ.

## ಸವದತ್ತಿ ತಾಲೂಕು.




**ಸ್ಥಾನ:**—ಈ ತಾಲೂಕು ಬೈಲಹೊಂಗಲ ತಾಲೂಕಿನ ಪೂರ್ವಕ್ಕಿರುತ್ತದೆ.

**ಮೇರೆ:**—ಉತ್ತರಕ್ಕೆ-ಗೋಕಾಕ ತಾಲೂಕು. ಪಶ್ಚಿಮಕ್ಕೆ-ಬೈಲಹೊಂಗಲ ತಾಲೂಕು. ದಕ್ಷಿಣಕ್ಕೆ-ಧಾರವಾಡ ಜಿಲ್ಹೆ. ಪೂರ್ವಕ್ಕೆ-ರಾಮದುರ್ಗ, ತೋರಗಲ್ಲ ಜಹಾಗೀರುಗಳು, ಕೊಲ್ಹಾಪುರ ಇಲಾಖೆಯ ಭಾಗ.

**ವಿಸ್ತಾರ:**—ಇದರ ಕ್ಷೇತ್ರವು ೬೪೦ ಚೌರಸ ಮೈಲು.

**ಜನಸಂಖ್ಯೆಯ ಪ್ರಮಾಣ:**—ಚೌರಸ ಮೈಲಿಗೆ ಸರಾಸರಿ ೧೬೦ ಜನರು.

**ಪ್ರಾಕೃತಿಕ ಸ್ವರೂಪ:**—ಈ ತಾಲೂಕಿನ ಮಧ್ಯಭಾಗದಲ್ಲಿ ಗುಡ್ಡದ ಒಂದು ಸಣ್ಣ ಸಾಲು ಇದ್ದು ಅದು ಆಗ್ನೇಯದಿಂದ ವಾಯುವ್ಯದ ವರೆಗೆ ಹಬ್ಬಿರುವದು. ಈ ಸಾಲಿನ ದಕ್ಷಿಣಕ್ಕೆ ಎಲ್ಲಮ್ಮನ ಗುಡ್ಡವಿರುವದು. ಇಲ್ಲಿಯ ಭೂಮಿಯು ಪೂರ್ವದ ಕಡೆಗೆ ಇಳುಕಲಾಗಿರುವದು. ಪೂರ್ವಭಾಗದಲ್ಲಿ ಉಸುಕಿನ ಭೂಮಿಯೂ, ಉತ್ತರ ಭಾಗದಲ್ಲಿ ಉಸುಕುಳ್ಳ ಕೆಂಪು ನೆಲವೂ ಇರುತ್ತವೆ. ದಕ್ಷಿಣಭಾಗದಲ್ಲಿ ಕರೇ ಭೂಮಿಯಿರುವದು. ಹೊಳೆಯ ದಂಡೆಯಲ್ಲಿ ಮೇಲಾದ ಭೂಮಿಯಿರುವದು.

**ಹವೆ:**--ಇಲ್ಲಿ ಒಣ ಹಾಗು ಉಷ್ಣ ಹವೆಯಿದ್ದು, ಆರೋಗ್ಯಕ್ಕೆ ಹಿತಕರವಾಗಿರುವದು.

**ಮಳೆ:**—ಮಳೆಯು ಕಡಿಮೆ, ಅಂದರೆ ಸರಾಸರಿ ೨೦-೨೫ ಇಂಚು.

**ಹೊಳೆ-ಹಳ್ಳಗಳು:**—ಮಲಪ್ರಭಾನದಿಯು ಪೂರ್ವದ ಕಡೆಗೆ ಹರಿದಿರುವದು. ಚಳ್ಳಳ್ಳ, ಮರಕುಂಬೀಹಳ್ಳಗಳು ಹೆಸರಾಗಿರುತ್ತವೆ. ಇವುಗಳ ದಂಡೆಯ ಪ್ರದೇಶವು ಬೆಳೆಯುಳ್ಳದ್ದಿರುವದರಿಂದ ಜನದಟ್ಟಣೆಯು ಹೆಚ್ಚಾಗಿರುವದು.

**ತಡಸಲು:**—ಸೊಗಲದ ಹತ್ತರ ಒಂದು ರಮಣೀಯವಾದ ತಡಸಲು ಇದ್ದು ಸಮೀಪದಲ್ಲಿ ಸೋಮೇಶ್ವರನ ಗುಡಿಯಿರುವದು. ಎತ್ತರವಾದ ವೃಕ್ಷಗಳ ಬನವೂ ಉಂಟು.

**ಬೆಳೆ:**—ಜೋಳ, ಹತ್ತಿ, ಗೋದಿ ಇವು ವಿಶೇಷವಾಗಿ ಬೆಳೆಯುತ್ತವೆ.

**ಜನರು:**—ಈ ತಾಲೂಕಿನ ಜನರ ಸ್ಥಿತಿಯು ಬಹುತರ ಗೋಕಾಕ ತಾಲೂಕಿನ ಜನರ ಸ್ಥಿತಿಗೆ ಹೋಲುವದು. ಮುಖ್ಯ ಆಹಾರವು ಜೋಳವಾಗಿರುವದು. ಉಷ್ಣಹವೆ ಇರುವದರಿಂದ ಜನರಲ್ಲಿ ಆಲಸ್ಯವು ಹೆಚ್ಚಾಗಿರುವದು.

**ಭಾಷೆ:**—ಸುತ್ತು ಮುತ್ತಲು ಕನ್ನಡ ಭಾಷೆಯ ಪ್ರದೇಶವಿರುವ ಮೂಲಕ ಕನ್ನಡ ಭಾಷೆಯು ನಡೆಯುವದು.

**ಉದ್ಯೋಗ:**—ಒಕ್ಕಲತನವು ಮುಖ್ಯ ಉದ್ಯೋಗವಾಗಿರುವದು. ನೇಯುವ ಕೆಲಸವಾದರೂ ಕೆಲಕೆಲವು ಕಡೆಗೆ ನಡೆಯುವದು.

**ಕಾರಖಾನೆ:**—ಸವದತ್ತಿಯಲ್ಲಿ ಹತ್ತಿ ಅರೆಯುವ ಗಿರಣಿಯುಂಟು.

**ಮುಖ್ಯ ಊರು:—ಸವದತ್ತಿ**—ಇದು ತಾಲೂಕಿನ ಮುಖ್ಯ ಸ್ಥಳವು. ತಾಲೂಕಕಚೇರಿ, ಮ್ಯುನಿಸಿಪಾಲಿಟಿ, ದವಾಖಾನೆ, ೫ನೆಯ ಇಯತ್ತೆಯ ವರೆಗಿನ ಇಂಗ್ಲಿಷಶಾಲೆ, ಪೋಸ್ಟಆಫೀಸು, ಮೊದಲಾದವುಗಳಿರುತ್ತವೆ. ಊರ ಪಶ್ಚಿಮಕ್ಕೆ ಒಂದು ದಿನ್ನೆಯ ಮೇಲೆ ಕೋಟೆ ಇದ್ದು ಸುತ್ತಲು ಕಿರಿದಾದ ಕಂದಕವಿರುವದು. ಆಗ್ನೇಯ ದಿಕ್ಕಿಗೆ ಎಲ್ಲಮ್ಮನ ಗುಡ್ಡವಿದ್ದು ಅಲ್ಲಿ ಚೈತ್ರ ಹುಣ್ಣಿವೆಗೂ, ಮಾರ್ಗಶೀರ್ಷ ಹುಣ್ಣಿವೆಗೂ ದೊಡ್ಡ ಜಾತ್ರೆ ನೆರೆಯುವದು. ಸಂತೆಯ ದಿವಸ ವ್ಯಾಪಾರವು ಚನ್ನಾಗಿ ಆಗುವದು. **ಮುರಗೋಡ**—ಇದು ಕರಳೆಯ ಹಚ್ಚಡ, ಬಣ್ಣದ ಚೀಟುಗಳ ಬಗ್ಗೆ ಹೆಸರಾಗಿರುತ್ತದೆ. ಶ್ರೀ ಚಿದಂಬರ ದೀಕ್ಷಿತರೆಂಬ ಹೆಸರಾದ ಸತ್ಪುರುಷರ ಸಮಾಧಿಯು ಊರಹತ್ತರ ಕೆಂಗೇರಿ ಎಂಬಲ್ಲಿದ್ದು ಪ್ರತಿವರ್ಷ ಮಾರ್ಗಶೀರ್ಷ ಶುದ್ಧ ೬ಗೆ ಉತ್ಸವವಾಗುತ್ತದೆ. ಮಲ್ಲಿಕಾರ್ಜುನನ ಜಾತ್ರೆಯು ಮಾರ್ಗಶೀರ್ಷದಲ್ಲಿ ಆಗುತ್ತದೆ. **ಗುರ್ಲಹೊಸೂರು** — ಇಲ್ಲಿ ಶ್ರೀಚಿದಂಬರ ದೇವಸ್ಥಾನವಿರುವದು. **ಸಿರಸಂಗಿ**-ಇಲ್ಲಿ ನೋಡತಕ್ಕಂಥ ಭದ್ರಕಾಲಿಯದೇವಸ್ಥಾನವುಂಟು. ಚೈತ್ರಮಾಸದಲ್ಲಿ ದೊಡ್ಡ ಜಾತ್ರೆ ನೆರೆಯುವದು ಕೈ. ವಾ. ಲಿಂಗರಾಜದೇಸಾಯಿಯರು ವೀರಶೈವರ ಶಿಕ್ಷಣದ ಸಲುವಾಗಿ ೪೦-೫೦ ಸಾವಿರ ರೂಪಾಯಿಗಳ ಉತ್ಪನ್ನವನ್ನು ಕೊಟ್ಟಿರುವರು. **ಮನ್ನೊಳ್ಳಿ**—ಇಲ್ಲಿಯ ಕರಳೆಯ ಹಚ್ಚಡ, ಜಾಜಮು ಮೊದಲಾದ ಅಚ್ಚುಹಾಕಿದ ವಸ್ತ್ರಗಳು ಪ್ರಸಿದ್ಧ. ಕೋಟೆಯ ಮೂರೂ ಬದಿಗಳಲ್ಲಿ ಮಲಪ್ರಭೆಯು ಹರಿದಿರುವದು. ಕೋಟೆಯೊಳಗೆ ಹನುಮಂತ, ಉಡಚವ್ವ ಎಂಬ ದೇವರ ಹಳೆ ಗುಡಿಗಳಿರುವವು. **ಸೊಗಲ**-- ತಡಸಲುಂಟು. ಶ್ರೀ ಸೋಮೇಶ್ವರನ ದೇವಸ್ಥಾನವಿದ್ದು ಜಾತ್ರೆ ನೆರೆಯುವದು. **ಪರಸಗಡ**—ಗುಡ್ಡದ ಮೇಲೊಂದು ಕೋಟೆಯುಂಟು. ಅಲ್ಲಿ ನೀರಿನ ಝರಿಯೂ, ಗವಿಯೂ ಇರುವವು. **ಅಸುಂಡಿ**—ರೇಶಿಮೆ ಅಂಚಿನ ಧೋತರಗಳು ಪ್ರಸಿದ್ಧ. **ಹೂಲಿ**—ಪಂಚಲಿಂಗನ ಗುಡಿಯು ಸುಂದರವಾದದ್ದು. ಊರ ಹೊರಗೆ ಕಲ್ಲಿನ ಸಣ್ಣದೊಂದು ಕೋಟೆಯುಂಟು. ಇವುಗಳಲ್ಲದೆ ಬೇರೆ ಕೆಲವು ಸಣ್ಣದೊಡ ಊರುಗಳುಂಟು. ( ನಕಾಶೆ ನೋಡಿರಿ. )

**ವ್ಯಾಪಾರದ ಜೀನಸು:**—ಜೋಳ, ಗೋದಿ, ಹತ್ತಿ, ಧೋತರ, ಜಾಜಮು, ಹಚ್ಚಡ ಮೊದಲಾದ ಬಟ್ಟೆಗಳು.

**ಪ್ರಶ್ನ:**—೧ ಈ ತಾಲೂಕಿನ ಭೂಮಿಯು ಯಾವ ಕಡೆಗೆ ಇಳುಕಲಾಗಿರುವದು? ೨ ಇಲ್ಲಿಯ ಜನರ ಸ್ಥಿತಿಯು ಯಾವ ಯಾವ ತಾಲೂಕಿನ ಜನರ ಸ್ಥಿತಿಗೆ ಹೋಲುವದು ಯಾಕೆ? ೩ ಕರಳೆಯು ಹಚ್ಚಡ, ಜಾಜಮುಗಳನ್ನು ತರಿಸಬೇಕಾದರೆ ಯಾವ ಯಾವ ಊರುಗಳಿಗೆ ಕಾಗದ ಬರೆಯುವಿರಿ? ೪ ಜಾತ್ರೆ ನೆರೆಯುವ ಸ್ಥಳಗಳು ಯಾವವು? ೫ ಯಾವ ಭಾಷೆ ನಡೆಯುತ್ತದೆ? ಮರಾಠಿ ಭಾಷೆಯು ನಡೆಯದಿರುವ ಕಾರಣವೇನು?

---

# ೩ ನೆಯ ಭಾಗ.

# ಮುಂಬಯಿ ಕರ್ನಾಟಕ.

## ೨೮ ನೆಯ ಪಾಠ.

### ಸಾಮಾನ್ಯ-ವರ್ಣನೆ.

ನಮ್ಮ ಜಿಲ್ಹೆಯ ಸುತ್ತು ಮುತ್ತಲು ಕನ್ನಡಿಗರ ವಸತಿಯು ವಿಶೇಷವಾಗಿರುವ ಹಾಗು ಕನ್ನಡ ಭಾಷೆ ನಡೆಯುವ ಯಾವ ಜಿಲ್ಹೆಗಳಿರುವವೋ ಅವುಗಳಿಗೆ "ಕನ್ನಡಜಿಲ್ಹೆ" ಗಳೆಂದೆನ್ನುತ್ತಾರೆ. ಅವು ಯಾವವೆಂದರೆ ಬೆಳಗಾಂವ, ಕಾರವಾರ, ಧಾರವಾಡ, ವಿಜಾಪುರ ಈ ಜಿಲ್ಹೆಗಳೂ, ಇವುಗಳಿಗೆ ಸಂಬಂಧಿಸಿದ ಕೊಲ್ಹಾಪುರ, ಸಾಂಗಲಿ, ಮಿರಜಿ, ಮುಧೋಳ, ಜತ್ತ, ರಾಮದುರ್ಗ, ಕುರುಂದವಾಡ, ಜಮಖಿಂಡಿ ಸಂಸ್ಥಾನಗಳೂ ಸೇರಿ ಮುಂಬಯಿ ಕರ್ನಾಟಕವಾಗಿರುವದು. [ ಮುಂಬಯಿ ಇಲಾಖೆಯ ನಕಾಶೆಯನ್ನು ನೋಡಿರಿ. ]

ನಮ್ಮ ಜಿಲ್ಹೆಯ ಪಶ್ಚಿಮ ಬದಿಗೆ ದಕ್ಷಿಣೋತ್ತರವಾಗಿರುವ ಸಹ್ಯಾದ್ರಿಯೇ ಮುಂಬಯಿ ಕರ್ನಾಟಕದಲ್ಲಿ ದಕ್ಷಿಣೋತ್ತರವಾಗಿ ಪಸರಿಸಿರುವದು. ಮನೆಯೊಳಗೆ ಗೋಡೆ ಹಾಕುವದರಿಂದ ಹೇಗೆ ಎರಡು ಭಾಗಗಳಾಗುವವೋ ಹಾಗೆ ಈ ಪರ್ವತದಿಂದ ಮುಂಬಯಿ ಕರ್ನಾಟಕದೊಳಗೆ ಸ್ವಾಭಾವಿಕವಾದ ಎರಡು

ಭಾಗಗಳಾಗಿರುತ್ತವೆ. ಸಹ್ಯಾದ್ರಿಯು ಪೂರ್ವ ಭಾಗವೂ, ಬೆಳಗಾಂವ, ಧಾರವಾಡ, ವಿಜಾಪುರ ಜಿಲ್ಹೆಗಳೂ ಸೇರುವವು. ಸಹ್ಯಾದ್ರಿಯ ಪಶ್ಚಿಮ ಕಡೆಗಿರುವ ಭಾಗಕ್ಕೆ ಕೊಂಕಣವೆಂದೆನ್ನುವರು. ಈ ಭಾಗದಲ್ಲಿ ಕಾರವಾರ ಜಿಲ್ಹೆಯ ಪಶ್ಚಿಮ ಭಾಗವು ಸೇರುವದು.

ಸಹ್ಯಾದ್ರಿಯು ಬಹಳ ಎತ್ತರವಾಗಿರುವದರಿಂದ ಅದರ ಮೇಲಿನ ಹವೆಯು ತಂಪಾಗಿರುವದು. ಪಶ್ಚಿಮ ಬದಿಗೆ ಸಮುದ್ರವು ಸಮೀಪವಾಗಿರುವದರಿಂದ ಕೊಂಕಣದಲ್ಲಿ ಇಳುಕಲು ಹೆಚ್ಚು. ಅದರಿಂದ ಹೊಳೆಗಳು ಒತ್ತರದಿಂದ ಹರಿಯುವವು. ಕೊಂಕಣವು ತಗ್ಗು ಪ್ರದೇಶವಾಗಿರುವದರಿಂದ ಹವೆಯು ಉಷ್ಣ. ಸಮೀಪದಲ್ಲಿ ಸಮುದ್ರವಿರುವದರಿಂದ ಹವಾಮಾನದಲ್ಲಿ ಹೆಚ್ಚು ಕಡಿಮೆಯಾಗುವದಿಲ್ಲ ದೇಶಕ್ಕೆ ಸಮುದ್ರವು ದೂರವಾಗಿರುವದರಿಂದ ಇಳುಕಲು ಸಾಧಾರಣ. ನಡುನಡುವೆ ಗುಡ್ಡದ ಸಾಲುಗಳು ಹಬ್ಬಿರುವವು. ಇಳುಕಲು ಸಾಧಾರಣವಾಗಿರುವದರಿಂದ ಹೊಳೆಗಳ ಪ್ರವಾಹವು ಮಂದವಾಗಿರುವದು. ಹವೆಯು ಸಾಧಾರಣ ಉಷ್ಣ.

ಪಶ್ಚಿಮ ಕಡೆಯಿಂದ ಬರುವ ಮಳೆಯು ಕೊಂಕಣದಲ್ಲಿಯೂ ಸಹ್ಯಾದ್ರಿಯ ಮೇಲೆಯೂ ಹೆಚ್ಚಾಗಿ ಬೀಳುವದು. ದೇಶದ ಮೇಲ್ಬದಿಗೆ ಬಂದಿರುವ ಮೋಡಗಳಲ್ಲಿ ಉಗಿಯು ಸ್ವಲ್ಪ ಉಳಿದಿರುವದರಿಂದ ಮಳೆಯು ಕಡಿಮೆಯಾಗುವದು. ದೇಶದಲ್ಲೆಲ್ಲ ಹಿಂಗಾರಿ ಮಳೆಯು ಚನ್ನಾಗಿ ಆಗುವದು.

ಕೊಂಕಣದೊಳಗಿನ ಹೊಳೆಗಳ ಉದ್ದಳತೆಯು ಕಡಿಮೆಯಾಗಿರುವದರಿಂದಲೂ, ಪ್ರವಾಹಗಳು ಒತ್ತರದಿಂದ ಹರಿಯುವದರಿಂದಲೂ ಭೂಮಿಯು ಬೆಳೆಯುಳ್ಳದ್ದಲ್ಲ. ಕೆಂಪು ಹಾಗು ಗರಸು ಭೂಮಿಗಳು ಎಲ್ಲ ಕಡೆಗೆ ಇರುತ್ತವೆ. ಶರಾವತಿಯು ಕೊಂಕಣದಲ್ಲಿಯ ದೊಡ್ಡ ಹೊಳೆಯು. ಇದಕ್ಕೆ ಗೆರಸಪ್ಪೆಯ ಹತ್ತರ ಹೆಸರಾದ ತಡಸಲು ಇರುವದು. ದೇಶದೊಳಗಿನ ಹೊಳೆಗಳ ಉದ್ದಳತೆಗಳು ಹೆಚ್ಚಾಗಿದ್ದು, ಪ್ರವಾಹಗಳು ಮಂದವಾಗಿರುತ್ತವೆ. ಕರೇ ಹಾಗು ಕಸ್ಪವುಳ್ಳ ಭೂಮಿಯೇ ಹೆಚ್ಚು. ಕೃಷ್ಣಾ, ಘಟಪ್ರಭಾ, ಮಲಪ್ರಭಾ, ಭೀಮಾ, ತುಂಗಭದ್ರಾ ಇವು ದೇಶದಲ್ಲಿ ಹರಿಯುವ ದೊಡ್ಡ ಹೊಳೆಗಳು. ಧರ್ಮಾ, ಘಟಪ್ರಭಾ ನದಿಗಳಿಗೆ ಕಾಲುವೆಗಳಿರುವದರಿಂದ ಭೂಮಿಗೆ ನೀರಿನ ಪೂರೈಕೆಯಾಗುವದು. ಆದುದರಿಂದ ಎಷ್ಟೋ ಭೂಮಿಯು ಬೆಳೆಯುಳ್ಳದ್ದಾಗಿರುವದು.

---

# ೨೯ ನೆಯ ಪಾಠ.

( ಮುಂದೆ ಸಾಗಿದ್ದು. )

ಕೊಂಕಣದಲ್ಲಿ ಮಳೆಯು ಹೆಚ್ಚು; ಹವೆಯು ಉಷ್ಣ. ಆದುದರಿಂದ ಭತ್ತವು ಮುಖ್ಯ ಬೆಳೆಯಾಗಿರುವದು. ರಾಗಿ, ಸಾವಿ, ಅವರೆ ಮೊದಲಾದವು ಗಳಾದರೂ ಬೆಳೆಯುವವು. ಸಮುದ್ರದಂಡೆಯಲ್ಲಿ ತೆಂಗು, ಅಡಿಕೆಗಳ ಹುಟ್ಟು ವಳಿಯು ಚನ್ನಾಗಿರುವದು. ಎಷ್ಟೋ ಕಡೆಗೆ ಉಪ್ಪು ತಯಾರಿಸುವರು. ಸಮು ದ್ರದಲ್ಲಿ ಮೀನುಗಳೂ, ಅಡವಿಯಲ್ಲಿ ಕಟ್ಟಿಗೆಗಳೂ ದೊರೆಯುವವು. ದೇಶದಲ್ಲಿಯ ಭೂಮಿಯು ಕಸುವುಳ್ಳದ್ದು, ಮಳೆಯು ಸಾಧಾರಣ. ಆದುದರಿಂದ ಜೋಳ, ಸಜ್ಜೆ, ಹತ್ತಿ ಇವು ಮುಖ್ಯ ಬೆಳೆಗಳು. ಕಾಲುವೆ ಹಾಗು ಬಾವಿಗಳ ನೀರಿನಿಂದ ಕಬ್ಬು, ಅರಿಶಿಣ, ಮೆಣಸಿನಕಾಯಿ, ಹಣ್ಣು-ಹಂಪಲ, ಕಾಯಿಪಲ್ಲೆ ಮೊದಲಾದ ಬೆಳೆಗಳು ಬರುತ್ತವೆ.

ಸಹ್ಯಾದ್ರಿಯ ಅಡವಿಯಲ್ಲಿ ಹುಲಿ, ಕಾಡಹಂದಿ ಮೊದಲಾದ ಹಿಂಸ್ರ ಪ್ರಾಣಿಗಳಿರುತ್ತವೆ. ಬೈಲು ಭೂಮಿಯಲ್ಲಿ ಚಿಗರಿ, ನರಿ, ತೋಳ ಮೊದಲಾದ ಪಶುಗಳು ಇರುತ್ತವೆ. ಎತ್ತು, ಎಮ್ಮೆಗಳು ಎಲ್ಲ ಕಡೆಗೆ ಇರುತ್ತವೆ. ಕೆಲಕೆಲವು ಕಡೆಗೆ ಕುರಿಗಳು ಇರುತ್ತವೆ.

ಹೋಗಿಬರುವ ಸಾಧನಗಳು ಕೊಂಕಣಕ್ಕಿಂತ ದೇಶದಲ್ಲಿ ಚನ್ನಾಗಿರು ವವು. ಪುಣೆಯಿಂದ ಹೊರಟ ಉಗೆಬಂಡಿಯ ಮಾರ್ಗವು ಮಿರಜೆ, ಬೆಳಗಾಂವಿ, ಲೋಂಡಾ, ಧಾರವಾಡ, ಹುಬ್ಬಳ್ಳಿ, ಹಾವೇರಿಗಳ ಮೇಲಿಂದ ಬೆಂಗಳೂರಿನ ಕಡೆಗೆ ಹೋಗಿದೆ. ಲೋಂಡಾದಿಂದ ಒಂದು ಶಾಖೆಯು ಗೋವೆಗೆ ಹೋಗಿದೆ. ಹುಬ್ಬಳ್ಳಿಯಿಂದ ಒಂದು ಶಾಖೆಯು ಅಣ್ಣಿಗೇರಿ, ಗದಗುಗಳ ಮೇಲಿಂದ ಬಳ್ಳಾ ರಿಯ ಕಡೆಗೆ ಹೋಗಿದೆ. ಗದಿಗಿನಿಂದ ಒಂದು ಶಾಖೆಯು ಆಲೂರ, ಬಾಗಲ ಕೋಟೆ, ವಿಜಾಪುರಗಳ ಮೇಲಿಂದ ಹುಟಗಿಗೆ ಹೋಗಿದೆ. ದೇಶದಲ್ಲಿ ಬಂಡಿಗಳು ಓಡಾಡುವ ಪಕ್ಕಾಮಾರ್ಗಗಳು ಎಲ್ಲ ಕಡೆಗೆ ಇರುತ್ತವೆ. ಪುಣೆಯಿಂದ ಬೆಂಗಳೂರಿಗೆ ಹೋಗುವ ಮುಖ್ಯ ಮಾರ್ಗವು ಕರ್ನಾಟಕದ ವಾಯುವ್ಯ ಮೂಲೆಯಿಂದ ಆಗ್ನೇಯ ಮೂಲೆಗೆ ಹೋಗಿದ್ದು, ಕೊಲ್ಹಾಪುರ, ಬೆಳಗಾಂವಿ, ಧಾರವಾಡ, ಹುಬ್ಬಳ್ಳಿ, ರಾಣೇಬಿನ್ನೂರಗಳ ಮೇಲಿಂದ ಹರಿಹರಕ್ಕೆ ಹೋಗಿ

ರುವದು. ಕೊಲ್ಹಾಪುರದಿಂದ ಹೊರಟ ಮಾರ್ಗವು ಅಥಣಿಯ ಮೇಲಿಂದ ವಿಜಾ- ಪುರಕ್ಕೆ ಹೋಗಿರುವದು. ಸಾವಂತವಾಡಿಯಿಂದ ಹೊರಟ ಮಾರ್ಗವು ಬೆಳಗಾಂವಿ, ಕಲಾದಗಿಗಳ ಮೇಲಿಂದ ಹಾಯ್ದು ವಿಜಾಪುರಕ್ಕೆ ಹೋಗಿರುವದು. ಗೋವೆಯ ಕಡೆಯಿಂದ ಹೊರಟ ಮಾರ್ಗವು ಧಾರವಾಡ, ಗದಗುಗಳ ಮೇಲಿಂದ ಹಾಯ್ದು ಬಳ್ಳಾರಿಗೆ ಹೋಗಿರುವದು. ಪಶ್ಚಿಮ ಸಮುದ್ರತೀರದ ಕುಮಠೆ, ಅಂಕೋಲೆಗಳಿಂದ ಹೊರಟ ಮಾರ್ಗವು ಹುಬ್ಬಳ್ಳಿಯ ಕಡೆಗೆ ಹೋಗಿರುವದು. ಧಾರವಾಡ, ಬೆಳಗಾಂವಿಗಳಿಂದ ಹೊರಟ ರಾಜಮಾರ್ಗಗಳು ಕಾರವಾರಕ್ಕೆ ಹೋಗಿರುತ್ತವೆ. ಕೊಂಕಣದೊಳಗೆ ಸಮುದ್ರದಂಡೆಯಿಂದ ಉಗೆಹಡಗ ಹಾಗು ಡೋಣಿಗಳಿಂದ ಹೋಗಿಬರುವ ಕಾರ್ಯಗಳು ನಡೆಯುವವು.

ಮುಂಬಯಿ ಕರ್ನಾಟಕದಲ್ಲಿ ಒಕ್ಕಲತನವು ಮುಖ್ಯ ಉದ್ಯೋಗವಾಗಿರುವದು. ಒಕ್ಕಲತನದ ಹೊರ್ತು ಮೀನು ಹಿಡಿಯುವದು, ಗಿರಣಿಗಳಲ್ಲಿ ಕೆಲಸ ಮಾಡುವದು, ಸರಕಾರಿ ನೌಕರಿ ಮಾಡುವದು ಇವು ಕೊಂಕಣದಲ್ಲಿಯ ಜನರ ಮುಖ್ಯ ಉದ್ಯೋಗಗಳು. ದೇಶದಲ್ಲಿ ನೇಕಾರಿಕೆ, ನೌಕರಿ ವ್ಯಾಪಾರ, ಕೂಲಿ ಕುಂಬಳಿ ಮೊದಲಾದ ವ್ಯವಸಾಯಗಳನ್ನು ಮಾಡುವಂಥ ಜನರಿರುವರು. ಇಳಕಲ್ಲ, ಗದಗ, ಬೆಟಗೇರಿ, ಹುಬ್ಬಳ್ಳಿ, ಬೆಳಗಾಂವಿ, ಶಹಾಪುರ, ರಬಕವಿ ಈ ಪಟ್ಟಣಗಳು ನೇಕಾರಿಕೆಯ ಒಗ್ಗ ಹೆಸರಾಗಿರುತ್ತವೆ. ಹುಬ್ಬಳ್ಳಿ, ಶಹಾಪುರ, ಸಾಂಗಲಿ ಇವುಗಳಲ್ಲಿ ತಾಮ್ರ-ಹಿತ್ತಾಳಿಗಳ ಪಾತ್ರೆಗಳು ಸಿದ್ಧವಾಗುತ್ತವೆ.

ಬೆಳಗಾಂವಿ ಜಿಲೆಯಲ್ಲಿ ಗೋಕಾಕದ ಹತ್ತರ ನೂಲಿನ ಗಿರಣಿಯೂ, ಧಾರವಾಡ ಜಿಲ್ಲೆಯ ಹುಬ್ಬಳ್ಳಿಯಲ್ಲಿ ರೇಲ್ವೆಯ ವರ್ಕಶಾಪವೂ ಇರುವವು. ಹತ್ತಿ ಬೆಳೆಯುವ ಪ್ರದೇಶದಲ್ಲಿ ಗಿರಣಿಗಳಿರುತ್ತವೆ.

ದೇಶದಲ್ಲಿಯ ಧಾನ್ಯ, ಕಂಬಳಿ, ತಂಬಾಕ ಇವು ಕೊಂಕಣಕ್ಕೆ ಹೋಗ್ತವವು. ಕೆಲವು ಧಾನ್ಯ ಹಾಗು ಅರಳೆ ಪರದೇಶಕ್ಕೆ ಹೋಗುವವು. ಕೊಂಕಣದಿಂದ ದೇಶದೊಳಗೆ ಅಕ್ಕಿ, ಉಪ್ಪು, ತೆಂಗು, ಅಡಿಕೆ, ಮಸಾಲೆಯ ಜೀನಸು ಮೊದಲಾದವುಗಳು ಬರುವವು. ಪರದೇಶಗಳಿಂದ ಇಲ್ಲಿಗೆ ಬಟ್ಟೆ, ಸಕ್ಕರೆ ಯಂತ್ರ, ದೀಪದಪೆಟ್ಟಿಗೆ, ಸ್ಟೇಶನರಿಸಾಮಾನು, ಮೋಟಾರ ಮೊದಲಾ ಸರಕುಗಳು ಬರುವವು.

# ೩೦ ನೆಯ ಪಾಠ.

( ಮುಂದೆ ಸಾಗಿದ್ದು. )

ಸಹ್ಯಾದ್ರಿಯ ಸುತ್ತುಮುತ್ತಲಿನ ಹಾಗು ಕೊಂಕಣದಲ್ಲಿಯ ಜನರು ಶರೀರದಿಂದ ಬಡಕರು. ಆದರೆ ಬಹಳಗಟ್ಟಿಗರು. ಭೂಮಿಯು ಅಷ್ಟೊಂದು ಬೆಳೆಯುಳ್ಳದ್ದಲ್ಲ. ಆದುದರಿಂದ ಜನರ ಸಾಂಪತ್ತಿಕ ಸ್ಥಿತಿಯು ಸಾಧಾರಣ. ಕೊಂಕಣದಲ್ಲಿಯ ಜನರು ಉದ್ಯೋಗಿಗಳೂ, ಅಚ್ಚುಕಟ್ಟುತನದವರೂ, ಮಿತ ವ್ಯಯವುಳ್ಳವರೂ ಆಗಿರುವರು. ದೇಶದಲ್ಲಿಯ ಜನರ ಸಾಂಪತ್ತಿಕಸ್ಥಿಯು ಚೆನ್ನಾಗಿರುವದು. ಜನರು ಶರೀರದಿಂದ ಗಡುತರರು. ಆದರೆ ಕಷ್ಟ ತಾಳಿ ಕೊಳ್ಳುವಂಥ ಸಾಮರ್ಥ್ಯವಿಲ್ಲದವರು. ಉದ್ಯೋಗದ ಮೇಲೆ ವಿಶೇಷ ಪ್ರೀತಿ ಇರುವದಿಲ್ಲ. ಅಚ್ಚುಕಟ್ಟುತನ, ಮಿತವ್ಯಯ ಇವುಗಳಲ್ಲಿ ಹಿಂದುಳಿದವರು.

**ಮುಖ್ಯ ಸ್ಥಳಗಳು:**—[ ಬೆಳಗಾಂವಿ ಜಿಲ್ಹೆಯ ಮುಖ್ಯ ಸ್ಥಳಗಳೂ, ಅವುಗಳ ವರ್ಣನೆಯೂ ಹಿಂದೆ ಬಂದಿದೆ. ]

**ಕಾರವಾರ ಜಿಲ್ಹೆ:**—**ಕಾರವಾರ**— ಇದು ಒಳ್ಳೇ ಬಂದರವಾಗಿರುವದು. **ಅಂಕೋಲೆ**—ಇದು ಬಂದರವು; ಮಾವಿನ ಹಣ್ಣುಗಳ ಬಗ್ಗೆ ಪ್ರಸಿದ್ಧ. ಮಾವಿನಹಣ್ಣಿನ ರಸತೆಗೆದು ಡಬ್ಬಿಗಳಲ್ಲಿ ತುಂಬಿ ಬಹುದಿನ ಕೆಡದಂತೆ ಮಾಡಿ ಪರಸ್ಥಳಕ್ಕೆ ಕಳುಹಿಸುವ ಕಾರಖಾನೆ ಇರುವದು. **ಗೋಕರ್ಣ**—ಇದು ಹೆಸರಾದ ಕ್ಷೇತ್ರಸ್ಥಾನವು. ಸುಂದರವಾದ ಮಹಾಬಲೇಶ್ವರನ ಗುಡಿಯುಂಟು. ಪ್ರತಿವರ್ಷ ಮಹಾಶಿವರಾತ್ರಿಗೆ ಲಕ್ಷಾವಧಿ ಜನರು ಕೂಡುವರು. **ತದಡಿ**—ಇದು ಬಂದರವು. ಗೋಕರ್ಣದ ಸಮೀಪದಲ್ಲಿರುವದು. ಆದದರಿಂದ ಹಡಗದಿಂದ ಬರುವಂಥ ಯಾತ್ರಿಕರು ಈ ಬಂದರದಲ್ಲಿಯೇ ಇಳಿಯಬೇಕಾಗುವದು. **ಸಾಣಿಕಟ್ಟೆ**-ಉಪ್ಪು ಮಾಡುವ ಕಾರಖಾನೆ ಇರುವದು. **ಕುಮಠೆ, ಹೊನ್ನಾವರ, ಭಟಕಳ** ಇವು ತಕ್ಕಮಟ್ಟಿಗೆ ಅನುಕೂಲವಿರುವ ಬಂದರಗಳು. **ಗೆರಸಪ್ಪೆ**-ಜಗಪ್ರಸಿದ್ಧವಾದ ತಡಸಲು ಇರುವದು. **ಸಿರಸಿ**-ಅಡಿಕೆ, ಯಾಲಕ್ಕಿ, ಮೆಣಸು ಇವುಗಳ ವ್ಯಾಪಾರದ ಬಗ್ಗೆ ಪ್ರಸಿದ್ಧ. **ಉಳವಿ**—ಲಿಂಗವಂತರ ಯಾತ್ರೆಯ ಸ್ಥಳವು.

**ಧಾರವಾಡ ಜಿಲ್ಲೆ:—ಧಾರವಾಡ**— ವಿದ್ಯಾವಿಷಯಕ ಸಂಸ್ಥೆಗಳ ಬಗ್ಗೆ ಹೆಸರಾದದ್ದು. ಕರ್ನಾಟಕ ಕಾಲೇಜ, ವಿದ್ಯಾವರ್ಧಕ ಸಂಘ, ಸಂಸ್ಕೃತ ಪಾಠಶಾಲೆ ಮೊದಲಾದವುಗಳಿರುತ್ತವೆ. **ಅಳ್ಣಾವರ**—ಕಟ್ಟಿಗೆಯ ವ್ಯಾಪಾರದ ಬಗ್ಗೆ ಪ್ರಸಿದ್ಧ. **ಹುಬ್ಬಳ್ಳಿ**—ಕರ್ನಾಟಕದಲ್ಲಿ ದೊಡ್ಡ ಪಟ್ಟಣವಾಗಿದ್ದು, ವ್ಯಾಪಾರದ ಬಗ್ಗೆ ಹೆಸರಾದದ್ದು. ಸಿದ್ಧಾರೂಢ ಸ್ವಾಮಿಗಳ ಮಠವಿದ್ದು, ಮಹಾಶಿವರಾತ್ರಿಗೆ ದೊಡ್ಡ ಜಾತ್ರೆಯು ನೆರೆಯುವದು. ವರ್ಕಶಾಪ್‌ವಿದೆ. **ಹೆಬಸೂರ**—ಇಲ್ಲಿಯ ಗುಡಾರಗಳು ಪ್ರಸಿದ್ಧ. **ಕಲಘಟಗಿ**—ಕಟ್ಟಿಗೆಯ ಬಣ್ಣದ ಆಟಿಗೆಯ ಸಾಮಾನುಗಳ ಬಗ್ಗೆ ಪ್ರಸಿದ್ಧ. **ಸಿಗ್ಗಾಂವಿ**—ಇಲ್ಲಿಯ ವಿಳ್ಯದ ಎಲೆಗಳು ಹೆಸರಾಗಿರುತ್ತವೆ. **ಆಲೂರ**—ಅಕ್ಕಿಯ ವ್ಯಾಪಾರದ ಬಗ್ಗೆ ಪ್ರಸಿದ್ಧ. **ಗದಗ**—ವ್ಯಾಪಾರದ ಸ್ಥಳವು. **ಬೆಟಗೇರಿ**—ಸೀರೆಗಳು ಪ್ರಸಿದ್ಧ. **ನವಲಗುಂದ**—ಜಮಖಾನೆಗಳು ಪ್ರಸಿದ್ಧ. **ಯಮನೂರ**—ಪೀರನ ಜಾತ್ರೆಯು ಹೆಸರಾದದ್ದು.

**ವಿಜಾಪೂರ ಜಿಲ್ಲೆ:—ವಿಜಾಪೂರ**—ಇಲ್ಲಿ ಗೋಳಗುಮುಟ, ಇಬ್ರಾಹಿಮರೋಜಾ ಮೊದಲಾದ ಕಟ್ಟಡಗಳೂ, ಮುಲುಖಮೈದಾನ ತೋಫೂ ನೋಡ ತಕ್ಕಂಥವಿರುವವು. ಅರಳೆ, ಗೋದಿ, ಜೋಳ, ಎಣ್ಣೆಯಕಾಳು ಇವುಗಳ ವ್ಯಾಪಾರವು ಹೆಚ್ಚಾಗಿ ನಡೆಯುವದು. **ಬಾಗಲಕೋಟೆ**—ವ್ಯಾಪಾರದ ಸ್ಥಳವು. ಅರಳೆ, ಅರಿವೆ, ಕಾಳು-ಕಡಿಗಳ ವ್ಯಾಪಾರವು ಹೆಚ್ಚಾಗಿ ನಡೆಯುವದು. **ಗುಳೇದಗುಡ್ಡ**— ಒಳ್ಳೇ ಖಣಗಳು ಹುಟ್ಟುವವು. **ಇಳಕಲ್ಲ**—ಇಲ್ಲಿಯ ಸೀರೆಗಳು ಪ್ರಸಿದ್ಧ. **ಬಾದಾಮಿ**—ಬನಶಂಕರಿಯ ಗುಡಿಯು ಪ್ರಸಿದ್ಧ. ಬನದ ಹುಣ್ಣಿವೆಗೆ ಜಾತ್ರೆಯಾಗುವದು. ವೀಳ್ಯದ ಎಲೆಗಳು ಹೆಸರಾದವು.

**ಪ್ರಶ್ನ:**—೧ ಮುಂಬಯಿ ಕರ್ನಾಟಕದಲ್ಲಿಯ ಸ್ವಾಭಾವಿಕ ಭಾಗಗಳೆಷ್ಟು? ಅವು ಯಾವವು? ೨ ಸಹ್ಯಾದ್ರಿಗೂ, ಸಮುದ್ರಕ್ಕೂ ನಡುವಿರುವ ಪ್ರದೇಶದ ಪ್ರಾಕೃತಿಕಸ್ವರೂಪ ಹೇಳಿರಿ. ೩ ಕೊಂಕಣಕ್ಕಿಂತ ದೇಶದ ಭೂಮಿಯು ಹೆಚ್ಚಿಗೆ ಬೆಳೆಯುಳದ್ದು ಯಾಕೆ? ೪ ಕೊಂಕಣದಿಂದ ದೇಶಕ್ಕೂ, ದೇಶದಿಂದ ಕೊಂಕಣಕ್ಕೂ ಬರಹೋಗುವ ಸರಕುಗಳು ಯಾವವು? ೫ ಗೋಕರ್ಣ, ಕಾರವಾರ, ಹುಬ್ಬಳಿ, ಇಳಕಲ್ಲ, ವಿಜಾಪುರ ಇವು ಯಾತರ ಬಗ್ಗೆ ಹೆಸರಾಗಿವೆ?

---

# ೩೧ ನೆಯ ಪಾಠ.

## ಸಂಸ್ಥಾನಗಳು.

ಮುಂಬಯಿ ಕರ್ನಾಟಕದಲ್ಲಿಯೂ, ಅದರ ಸುತ್ತುಮುತ್ತಲೂ ಕೆಲವು ಸಂಸ್ಥಾನಗಳಿರುತ್ತವೆ. ಅವುಗಳಲ್ಲಿ ಕೊಲ್ಹಾಪುರ ಸಂಸ್ಥಾನವು ದೊಡ್ಡದಾಗಿದ್ದು ಉಳಿದ ಸಾಂಗಲಿ, ಮಿರಜಿ, ಮುಧೋಳ, ಜತ್ತ, ರಾಮದುರ್ಗ, ಕುರುಂದವಾಡ, ಜಮಖಿಂಡಿ ಜಹಾಗೀರುಗಳು ಸಣ್ಣವಾಗಿರುತ್ತವೆ. ಇವೆಲ್ಲವುಗಳಲ್ಲಿ ಮೂಲ ಭಾಷೆ ಕನ್ನಡ ಇದ್ದು ಈಗ ಮರಾಠಿ ಭಾಷೆಯು ನಡೆಯುವದು.

**ಕೊಲ್ಹಾಪುರ ಸಂಸ್ಥಾನ:**—ಇದು ಎಲ್ಲಕ್ಕೂ ದೊಡ್ಡ ಸಂಸ್ಥಾನವು. ಇದರ ಪಶ್ಚಿಮ ಬದಿಯು ಬಹಳ ಭಾಗವು ಗುಡ್ಡಗಾಡು. ಗಿಡಗಂಟಿಗಳು ವಿಶೇಷ. ಆದುದರಿಂದ ಮಳೆ ಹೆಚ್ಚು. ಅಡವಿಯಲ್ಲಿ ಅಳಲೀಕಾಯಿಯು ಹುಟ್ಟುವಳಿಯು ಹೆಚ್ಚಾಗಿರುವದು. ಜೋಳ ಹಾಗು ಭತ್ತ ಇವು ಮುಖ್ಯ ಬೆಳೆಗಳು.

**ಕೊಲ್ಹಾಪುರ:**—ಇದು ರಾಜಧಾನಿಯ ಸ್ಥಳವು. ದಕ್ಷಿಣಕಾಶಿ ಅನ್ನುತ್ತಾರೆ ಕೊಂಕಣದ ಸಂಗಡ ವಿಶೇಷ ವ್ಯಾಪಾರ ನಡೆಯುವದು. ಶ್ರೀ. ಅಂಬಾಬಾಯಿಯ ದೇವಸ್ಥಾನವು ಪ್ರಸಿದ್ಧ. ಶಾಹುಪುರಿಯಲ್ಲಿರುವ ಹೊಸ ಅರಮನೆಯು ನೋಡತಕ್ಕಂಥಾದ್ದಿರುತ್ತದೆ. ಇಲ್ಲಿ ರಾಜಾರಾಮನ ಹೆಂಡತಿಯಾದ ತಾರಾಬಾಯಿಯು ಸ್ವತಂತ್ರವಾದ ಸಿಂಹಾಸನವನ್ನು ಸ್ಥಾಪಿಸಿದಳು. ಅರಸನು ಶಿವಾಜಿಮಹಾರಾಜನ ವಂಶದವನಿರುವದರಿಂದ ಅವನಿಗೆ "ಛತ್ರಪತಿ ಮಹಾರಾಜ" ಎಂದೆನ್ನುತ್ತಾರೆ. ಬಾವಡೆ, ಕಾಗಲ, ವಿಶಾಲಗಡ, ಇಚ್ಚಲಕರಂಜಿ ಮೊದಲಾದ ಚಿಕ್ಕ ಚಿಕ್ಕ ಸಂಸ್ಥಾನಗಳ ಒಡೆಯರು ಮಾಂಡಲಿಕರಾಗಿರುವರು.

**ಸಾಂಗಲಿ ಸಂಸ್ಥಾನ:**—ಇದು ಪಟವರ್ಧನನೆಂಬ ಬ್ರಾಹ್ಮಣನ ವಶದಲ್ಲುಂಟು. ಇದರಲ್ಲಿ ಆರು ತಾಲೂಕುಗಳಿರುತ್ತವೆ. ಸಾಂಗಲಿಯು ಕೃಷ್ಣಾನದಿಯ ದಂಡೆಯಲ್ಲಿದ್ದು ರಾಜಧಾನಿಯ ಸ್ಥಳವಾಗಿರುವದು. ವ್ಯಾಪಾರದ ಬಗ್ಗೆ ಪ್ರಸಿದ್ಧ ಸ್ಥಳವು. ಉಗಿಬಂಡಿಯ ಸ್ಟೇಶನವುಂಟು.

**ಮಿರಜಿ ಸಂಸ್ಥಾನ:**—ಇದು ಪಟವರ್ಧನರೆಂಬ ಬ್ರಾಹ್ಮಣರ ವಶದಲ್ಲಿದ್ದು, ಅವರಲ್ಲಿ ಎರಡು ಮನೆತನಗಳಾಗಿರುತ್ತವೆ. ಅವುಗಳಲ್ಲಿ ಒಂದಕ್ಕೆ ಹಿರೇಮನೆತನವೆಂದೂ, ಮತ್ತೊಂದಕ್ಕೆ ಚಿಕ್ಕ ಮನೆತನವೆಂದೂ ಅನ್ನುವರು. ಆರು ತಾಲೂಕುಗಳಿದ್ದು, ಪ್ರತಿಯೊಂದು ಮನೆತನದವರ ವಶದಲ್ಲಿ ಮೂರು, ಮೂರು ತಾಲೂಕುಗಳಿರುತ್ತವೆ. ಹಿರೇಮನೆತನದವರ ರಾಜಧಾನಿಯು ಮಿರಜಿ. ಚಿಕ್ಕ ಮನೆತನದವರ ರಾಜಧಾನಿಯು ಬುದಗಾಂವಿ. ಮಿರಜಿಯು ರೇಲ್ವೇ ಜಂಕ್ಷನ್ ಸ್ಥಳವು. ಈಗಿಒಂಡಿಯು ಮಾರ್ಗಗಳು ಕೊಲ್ಹಾಪುರ, ಸಾಂಗಲಿ, ಪಂಢರಪುರಗಳ ಕಡೆಗೆ ಹೋಗಿರುತ್ತವೆ. ಅಮೇರಿಕನ್ ಮಿಶ್ಶನ್ ಆಸ್ಪತ್ರಿಯು ಹೆಸರಾದದ್ದು. ದೇಶೀಯ ಉದ್ಯೋಗ ಕೈಗಾರಿಕೆಗಳಿಗೆ ಅರಸರಿಂದ ಉತ್ತೇಜನ ದೊರೆಯುತ್ತಿರುವದು

**ಮುಧೋಳ ಸಂಸ್ಥಾನ:**—ಇದು ಘೋರ್ಪಡೆ ಎಂಬ ಮಹಾರಾಷ್ಟ್ರ ಮನೆತನದವರ ವಶದಲ್ಲಿರುವದು. ಇದರಲ್ಲಿ ಐದು ತಾಲೂಕುಗಳಿರುತ್ತವೆ. ಮುಧೋಳವು ಘಟಪ್ರಭಾನದಿಯ ಧಡದಲ್ಲಿದ್ದು ರಾಜಧಾನಿಯ ಸ್ಥಳವಾಗಿರುವದು.

**ಜತ್ತ ಸಂಸ್ಥಾನ:**—ಇದು ಢಪಳೆ ಎಂಬ ಮಹಾರಾಷ್ಟ್ರ ಮನೆತನದ ವಶದಲ್ಲಿರುವದು. ಜತ್ತ ರಾಜಧಾನಿಯು ಸ್ಥಳವು.

**ರಾಮದುರ್ಗ ಸಂಸ್ಥಾನ:**—ಇದು ಭಾವೇ ಮನೆತನದ ಬ್ರಾಹ್ಮಣನ ವಶದಲ್ಲಿರುವದು. ರಾಮದುರ್ಗವು ಮಲಪ್ರಭಾನದಿಯ ಧಡದಲ್ಲಿದ್ದು ರಾಜಧಾನಿಯ ಸ್ಥಳವಾಗಿರುವದು.

**ಕುರುಂದವಾಡ ಸಂಸ್ಥಾನ:**—ಇದು ಪಟವರ್ಧನರೆಂಬ ಬ್ರಾಹ್ಮಣರ ವಶದಲ್ಲಿದ್ದು ಅವರಲ್ಲಿ ಎರಡು ಮನೆತನಗಳಾಗಿರುತ್ತವೆ. ಅವುಗಳಲ್ಲಿ ಒಂದಕ್ಕೆ ಹಿರೇಮನಸತನವೆಂದೂ, ಮತ್ತೊಂದಕ್ಕೆ ಚಿಕ್ಕಮನೆತನವೆಂದೂ ಎನ್ನುವರು. ಇದರಲ್ಲಿ ಐದು ತಾಲೂಕುಗಳಿರುತ್ತವೆ. ಕುರುಂದವಾಡವು ಕೃಷ್ಣಾ, ಪಂಚಗಂಗಾ ನದಿಗಳ ಸಂಗಮದ ಬಳಿಯಲ್ಲಿರುವದು. ಶ್ರೀವಿಷ್ಣುವಿನ ದೇವಸಾನವು ನೋಡತಕ್ಕಂಥಾದ್ದಿರುತ್ತದೆ.

**ಜಮಖಿಂಡಿ ಸಂಸ್ಥಾನ:**—ಇದು ಪಟವರ್ಧನ ಮನೆತನದ ಬ್ರಾಹ್ಮಣನ ವಶದಲ್ಲಿರುವದು. ಇದರಲ್ಲಿ ಎರಡು ತಾಲೂಕುಗಳುಂಟು. ಜಮಖಿಂಡಿಯು ರಾಜಧಾನಿಯ ಸ್ಥಳವು. ಅರಸರು ರಾಮತೀರ್ಥವೆಂಬಲ್ಲಿ ಇರುವರು. ಅಲ್ಲಿಯ ತ್ರಿಪುರ ಸುಂದರಿಯ ಗುಡಿಯು ನೋಡತಕ್ಕಂಥಾದ್ದಿರುವದು. ಹೈಸ್ಕೂಲಿನಲ್ಲಿ ಶಿಕ್ಷಣವು ಪುಕ್ಕಟೆಯಾಗಿ ಕೊಡಲ್ಪಡುವದು. ( ಫೀ ಒಂದು ಆಣೆ ). ಆರು ಮೈಲಿನ ಮೇಲಿರುವ ಕೃಷ್ಣಾನದಿಯ ನೀರನ್ನು ಊರ ಜನರಿಗೆ ಪೂರೈಸುವದರ ಸಲುವಾಗಿ ಲಕ್ಷಗಟ್ಲೆ ರೂಪಾಯಿ ವೆಚ್ಚಮಾಡಿ ಕಟ್ಟಿಸಿದ ನೀರಿನ ಸಂಚಯವು ನೋಡತಕ್ಕಂಥಾದ್ದಿರುವದು.

ಮೇಲ್ಗಡೆಯಲ್ಲಿ ಬರೆದ ಎಲ್ಲ ಸಂಸ್ಥಾನಗಳ ಮೇಲ್ವಿಚಾರಣೆ ಮಾಡುವ ಪೋಲೀಟಕಲ್ ಎಜಂಟನು ಕೊಲ್ಹಾಪುರದಲ್ಲಿರುವನು. ಈ ಎಲ್ಲ ಸಂಸ್ಥಾನಿಕರು ಇಂಗ್ಲಿಷ ಸರಕಾರದವರ ಮಿತ್ರರಾಗಿದ್ದು ಅವರ ಸಂಗಡ ಪ್ರೀತಿಯಿಂದ ನಡಕೊಳ್ಳುವರು.

**ಪ್ರಶ್ನ:**— ೧ ಕೊಲ್ಹಾಪುರ ಸಂಸ್ಥಾನದ ಪಶ್ಚಿಮಭಾಗದಲ್ಲಿ ಮಳೆ ಹೆಚ್ಚು. ಯಾಕೆ? ೨ ಬ್ರಾಹ್ಮಣ ಹಾಗು ಮಹಾರಾಷ್ಟ್ರರ ವಶದಲ್ಲಿರುವ ಜಹಾಗೀರುಗಳು ಯಾವವು? ೩ ಕೊಲ್ಹಾಪುರ, ಕುರುಂದವಾಡ, ಜಮಖಿಂಡಿಗಳ ಬಗ್ಗೆ ಗೊತ್ತಾದ ಸಂಗತಿ ಹೇಳಿರಿ.

---

# ಶ್ರೀಭುವನೇಶ್ವರಿ ಗ್ರಂಥಮಾಲೆ.

**ಸಂಪಾದಕ:— ಬಿ. ಕಲ್ಯಾಣಶರ್ಮಾ.**

**ಮಹನೀಯರೇ,**

ನಮ್ಮ ಕನ್ನಡನಾಡಿನ ಹಾಗೂ ಕನ್ನಡಿಗರ ಸದ್ಯಸ್ಥಿತಿಯು ಸುಧಾರಿಸಿ ಇರುವ ಕೊರತೆಯನ್ನು ತುಸುವಾದರೂ ಹೋಗಲಾಡಿಸಬೇಕೆಂದು ಸಾಹಸದಿಂದ ಮುಂದಾಗಿ ಅಳಲಿಯ ಭಕ್ತಿಯಿಂದ ನುಡಿತಾಯಿಯ ಸೇವೆಯಲ್ಲಿ ನಮ್ಮ ಶಕ್ತಿಯನ್ನೂ, ಬುದ್ಧಿಯನ್ನೂ ವೆಚ್ಚಮಾಡಬೇಕೆಂಬ ಸದುದ್ದೇಶದಿಂದ ಪ್ರೇರಿತರಾಗಿ, "**ಶ್ರೀಭುವನೇಶ್ವರಿ ಗ್ರಂಥಮಾಲೆ**" **ಯನ್ನು** ಹೊರಡಿಸಿದುದು. ಕನ್ನಡಿಗರೆಲ್ಲರೂ, ಮುಕ್ತ ಕಂಠದಿಂದ ಹೊಗಳುತ್ತಿರುವ ಅನೇಕ ಕತೆ-ಕಾದಂಬರಿ, ಚರಿತ್ರೆ, ನಾಟಕ, ಶಾಸ್ತ್ರೀಯ ಗ್ರಂಥಗಳು, ಧಾರ್ಮಿಕ ಪುಸ್ತಕಗಳು, ಇತಿಹಾಸಗಳು ಇವೇ ಮುಂತಾದ ಉಪಯುಕ್ತ ಗ್ರಂಥಗಳನ್ನೇ ಓದುಗರಿಗೆ **ನಿಯಮಿತತನದಿಂದ** ಸುಲಭ ಬೆಲೆಯಲ್ಲಿ ಒದಗಿಸಿ ಕೊಡುವದೇ ನಮ್ಮ ಮಾಲೆಯ ಉದ್ದೇಶ. ಸಾಧ್ಯವಾದಲ್ಲಿ, ಗ್ರಂಥಗಳನ್ನು ಸಚಿತ್ರ ಮಾಡಬೇಕೆಂದೂ ನಮ್ಮ ಬಲವಾದ ಆಶೆ.

ನಮ್ಮ ಮಾಲೆಗೆ ಸಹಾಯಮಾಡುವ ಪ್ರಕಾರಗಳು:— (೧) ೧೦ ರು. ಅಥವಾ ಹೆಚ್ಚಿಗೆ ಕೊಟ್ಟವರು ಆಜೀವ ಚಂದಾದಾರರು. (ಇವರಿಗೆ ಮಾಲೆಯ ಎಲ್ಲ ಪುಸ್ತಕಗಳು ಪುಕ್ಕಟೆಯಾಗಿ ಕೊಡಲ್ಪಡುವವು. ಇವರ ಹೆಸರು ಗ್ರಂಥದಲ್ಲಿ ಮುದ್ರಿಸಲ್ಪಡುವವು. (೨) ೨ ರು. ಮುಂಗಡಕೊಟ್ಟವರು ವಾರ್ಷಿಕ ಚಂದಾದಾರರು. (ಇವರಿಗೆ ಅಂಚೆ ಇಲ್ಲದೆ ೧ ವರ್ಷದವರೆಗೆ ಗ್ರಂಥಗಳು ಕಳಿಸಲ್ಪಡುವವು). ಚಂದಾದಾರರು ನಾಲ್ಕಾ ಆಣೆ ಪ್ರವೇಶ ಫಿ ಕೊಡಲೇಬೇಕು. ಆಜೀವ ಹಾಗೂ ಸ್ಥಳಿಕ ಚಂದಾದಾರರಿಗೆ ಪ್ರವೇಶ ಫೀ ಇಲ್ಲ.

**೧ ಕನ್ನಡ ಕೇಸರಿ** (ಸಂಗೊಳ್ಳಿರಾಯಣ್ಣ) **ಬೆಲೆ ೮ ಆ.**

೨ ಪಂ. **ಮೋತೀಲಾಲ ನೇಹರು** ಬೆಲೆ. ೬ ಆ.

ನಗರ **ವೆಂಕಟರಾಯ,**

**ಶ್ರೀಭುವನೇಶ್ವರಿ ಗ್ರಂಥಮಾಲೆ, ಬೆಳಗಾವಿ**

---

ಹೊಸ ಅಭ್ಯಾಸಕ್ರಮವನ್ನನುಸರಿಸಿ ಬರೆಯಲ್ಪಟ್ಟ
ಳನೆಯ ಇಯತ್ತೆಯ
ಜಮಾಖರ್ಚು.

ಈ ಪುಸ್ತಕವು "ಟೆಕ್‍ಸ್ಟ ಬುಕ್" ಎಂದು ಮಂಜೂರಾಗಿದೆ.




ಬೆಲೆ:—೩ ಆಣೆ

ವಿಳಾಸ:—ಶ್ರೀ ಬಲಭೀಮ ಸ್ಟೋಅರ್ಸ, ಕಾಗವಾಡ.
ಜಿಲ್ಹಾ:—ಬೆಳಗಾಂವ.